# ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯ ಆರ್ಥಿಕ ಮತ್ತು ಆರ್ಥಿಕೇತರ ಪರಿಣಾಮಗಳು ಒಂದು ಪ್ರಕರಣ ಅಧ್ಯಯನ

ಹಂಪಿ ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್ ಪದವಿಗಾಗಿ
ಸಾದರಪಡಿಸಿದ ಸಂಪ್ರಬಂಧ

ಸಂಶೋಧಕರು

ಕೆ. ಜಿ. ಸುಧಾಕರ

ಮಾರ್ಗದರ್ಶಕರು

ಡಾ. ಸುರೇಶ ರಮಣ ಮಯ್ಯ

೨೦೧೧

ನೊಂದಣಿ ಸಂಖ್ಯೆ KTSMDS-00449




ಕರ್ನಾಟಕ ಥಿಯೊಲಾಜಿಕಲ್ ಸಂಶೋಧನಾ ಕೇಂದ್ರ

ಬಲ್ಮಠ, ಮಂಗಳೂರು – ೫೭೫೦೦೬

932

# ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯ ಆರ್ಥಿಕ ಮತ್ತು ಆರ್ಥಿಕೇತರ ಪರಿಣಾಮಗಳು ಒಂದು ಪ್ರಕರಣ ಅಧ್ಯಯನ

ಹಂಪಿ ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್ ಪದವಿಗಾಗಿ
ಸಾದರಪಡಿಸಿದ ಸಂಪ್ರಬಂಧ

ಸಂಶೋಧಕರು

ಕೆ. ಜಿ. ಸುಧಾಕರ

[illegible] ಗ್ರಂಥಾಲಯ,
[illegible] ವಿಶ್ವವಿದ್ಯಾಲಯ, ಹಂಪಿ

ಮಾರ್ಗದರ್ಶಕರು

ಡಾ. ಸುರೇಶ ರಮಣ ಮಯ್ಯ

೨೦೧೧

ನೊಂದಣಿ ಸಂಖ್ಯೆ : **KTSMDS-00449**

ಕರ್ನಾಟಕ ತಿಯೊಲಾಜಿಕಲ್ ಸಂಶೋಧನಾ ಕೇಂದ್ರ

ಬಲ್ಮಠ, ಮಂಗಳೂರು – ೫೭೫೦೦೧



# ಪ್ರಮಾಣ ಪತ್ರ

ಹಂಪಿ ಕನ್ನಡ ವಿಶ್ವವಿದ್ಯಾಲಯುದ ಎಂ.ಫಿಲ್ ಪದವಿಗಾಗಿ ಸಾದರಪಡಿಸಿದ **ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯ ಆರ್ಥಿಕ ಮತ್ತು ಆರ್ಥಿಕೇತರ ಪರಿಣಾಮಗಳು ಒಂದು ಪ್ರಕರಣ ಅಧ್ಯಯನ** ಶೀರ್ಷಿಕೆಯ ಈ ಸಂಪ್ರಬಂಧವು ನನ್ನ ಸ್ವತಂತ್ರ ಕೃತಿಯಾಗಿದ್ದು, ವಿಶ್ಲೇಷಣೆ ಮತ್ತು ಅಧ್ಯಯನದ ಫಲೋದಯವಾಗಿದೆ. ಮಂಗಳೂರಿನ ಕರ್ನಾಟಕ ತಿಯೊಲಾಜಿಕಲ್ ಸಂಶೋಧನಾ ಕೇಂದ್ರದಲ್ಲಿ ಡಾ. ಸುರೇಶ ರಮಣ ಮಯ್ಯ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ ಈ ಸಂಪ್ರಬಂಧವನ್ನು ಬೇರಾವುದೇ ಪದವಿ, ಡಿಪ್ಲೋಮಾ ಅಥವಾ ತತ್ಸಮಾನ ಉಪಾಧಿಗಳ ಪ್ರಾಪ್ತಿಗಾಗಿ ಅಥವಾ ಆರ್ಥಿಕ ಲಾಭಕ್ಕಾಗಿ ಇಡಿಯಾಗಿ ಅಥವಾ ಬಿಡಿಯಾಗಿ ಬಳಸಿಕೊಂಡಿಲ್ಲವೆಂದು ನಾನು ಈ ಮೂಲಕ ದೃಢಪಡಿಸುತ್ತೇನೆ.

ಕನ್ನಡ ಗ್ರಂಥಾಲಯ,
ಕನ್ನಡ ವಿಶ್ವವಿದ್ಯಾಲಯ, ಹಂಪಿ

**ಕೆ. ಜಿ. ಸುಧಾಕರ**

ಸಂಶೋಧಕರು

**ಕರ್ನಾಟಕ ತಿಯೊಲಾಜಿಕಲ್ ಸಂಶೋಧನಾ ಕೇಂದ್ರ**

ಬಲ್ಮಠ, ಮಂಗಳೂರು.





# ಯೋಗ್ಯತಾ ಪತ್ರ

**ಕೆ. ಜಿ. ಸುಧಾಕರ** ಅವರು ನನ್ನ ಸಲಹೆ ಮತ್ತು ಮಾರ್ಗದರ್ಶನದಲ್ಲಿ **ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯ ಆರ್ಥಿಕ ಮತ್ತು ಆರ್ಥಿಕೇತರ ಪರಿಣಾಮಗಳು – ಒಂದು ಪ್ರಕರಣ ಅಧ್ಯಯನ** ಎಂಬ ಶೀರ್ಷಿಕೆಯ ಈ ಸಂಪ್ರಬಂಧವನ್ನು ಎಂ.ಫಿಲ್ ಪದವಿ ಪ್ರಾಪ್ತಿಗಾಗಿ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಬೇಕೆಂದು ಸಿದ್ಧಪಡಿಸಿದ್ದಾರೆ. ಈ ಸಂಪ್ರಬಂಧವವು ಸಂಶೋಧಕರ ಸ್ವಂತ ಪರಿಶ್ರಮ, ವಿಶ್ಲೇಷಣೆ, ಅಭಿಪ್ರಾಯ ಸಂಗ್ರಹ ಮತ್ತು ಸಂಶೋಧನೆಯ ಫಲಸ್ವರೂಪವಾಗಿದೆ. ಇವರು ಸಂಪ್ರಬಂಧದ ವಿಷಯವನ್ನು ಅಥವಾ ಇದರ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಲಿ ಅಥವಾ ಇನ್ನಿತರ ಉದ್ದೇಶಗಳಿಗಾಗಿಯಾಗಲಿ ಬಳಸಿಕೊಂಡಿಲ್ಲ.

**ಡಾ. ಸುರೇಶ ರಮಣ ಮಯ್ಯ**
ಸಂಶೋಧನ ಮಾರ್ಗದರ್ಶಕರು
**ಕರ್ನಾಟಕ ತಿಯೊಲಾಜಿಕಲ್ ಸಂಶೋಧನಾ ಕೇಂದ್ರ**
ಬಲ್ಮಠ, ಮಂಗಳೂರು.



# ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯ ಆರ್ಥಿಕ ಮತ್ತು ಆರ್ಥಿಕೇತರ ಪರಿಣಾಮಗಳು ಒಂದು ಪ್ರಕರಣ ಅಧ್ಯಯನ

## ಅಧ್ಯಯನದ ವಿವರಗಳು

# ಅಧ್ಯಾಯ – ೧

# ಅಧ್ಯಯನದ ಉದ್ದೇಶ, ಸ್ವರೂಪ, ಮಹತ್ವ ಮತ್ತು ಪ್ರಾಮುಖ್ಯತೆ

## ೧.೧. ಪ್ರವೇಶ

ಜಗತ್ತಿನ ಅತ್ಯಂತ ಬೃಹತ್ ಪ್ರಜಾಪ್ರಭುತ್ವ ರಾಷ್ಟ್ರ ಎಂಬ ಹೆಗ್ಗಳಿಕೆಗೆ ಪಾತ್ರವಾಗಿರುವ ಭಾರತಕ್ಕೆ ವಿಶ್ವ ಆರ್ಥಿಕ ವ್ಯವಸ್ಥೆಯಲ್ಲಿ ಮಹತ್ವದ ಸ್ಥಾನವಿದೆ. ಅನೇಕ ಜೀವನದಿಗಳು, ಖನಿಜಗಳು, ಪರ್ವತ ಶ್ರೇಣಿಗಳು ಹಾಗೂ ಉತ್ತಮ ಹವಾಮಾನ ಮತ್ತು ಪರಿಸರವನ್ನು ಹೊಂದಿರುವ ಭಾರತ ನೈಸರ್ಗಿಕವಾಗಿ ಒಂದು ಶ್ರೀಮಂತ ದೇಶವಾಗಿದೆ. ಅಲಿಪ್ತ ಚಳುವಳಿಯ ಮುಂಚೂಣಿಯಲ್ಲಿರುವ ಭಾರತ, ಹಿಂದುಳಿದ ರಾಷ್ಟ್ರಗಳ ನೇತಾರನೆಂಬ ಸ್ಥಾನಬಲ ಪಡೆದು ಆರ್ಥಿಕವಾಗಿ, ಸಾಮಾಜಿಕವಾಗಿ ಮತ್ತು ರಾಜಕೀಯವಾಗಿ ಜಗತ್ತಿನ ಎಲ್ಲರ ಗಮನ ಸೆಳೆಯುತ್ತಿದೆ. ಅಭಿವೃದ್ಧಿ ಪಥದಲ್ಲಿ ದೃಢವಾಗಿ ಸಾಗುತ್ತಿರುವ ನಮ್ಮ ರಾಷ್ಟ್ರ ಅನೇಕ ಜ್ವಲಂತ ಸಮಸ್ಯೆಗಳ ಸುಳಿಯಲ್ಲಿ ಸಿಲುಕಿಕೊಂಡು ವೈವಿಧ್ಯತೆಯಲ್ಲಿ ಏಕತೆಯನ್ನು ಸಾಧಿಸಲು ಪ್ರಯತ್ನಿಸುತ್ತಿದೆ.

ಅಂತರರಾಷ್ಟ್ರೀಯ ವೇದಿಕೆಗಳಲ್ಲಿ ಪ್ರಮುಖ ಸ್ಥಾನ ಪಡೆದಿರುವ ಭಾರತ ಒಂದು ಬೃಹತ್ ರಾಷ್ಟ್ರವಾಗಿದೆ. ೩೨,೮೭,೨೬೩ ಚ.ಕೀ. ವಿಸ್ತೀರ್ಣ ಹೊಂದಿರುವ ಭಾರತ ಜಗತ್ತಿನಲ್ಲಿ ೭ನೇ ಬೃಹತ್ ರಾಷ್ಟ್ರವಾಗಿದೆ. ಸುಮಾರು ೧೧೩ ಕೋಟಿ ಜನಸಂಖ್ಯೆ ಹೊಂದಿರುವ ನಮ್ಮ ಭವ್ಯ ರಾಷ್ಟ್ರ ಜನಸಂಖ್ಯೆಯ ಗಾತ್ರದಲ್ಲಿ ಎರಡನೇ ಬೃಹತ್ ರಾಷ್ಟ್ರದ ಸ್ಥಾನ ಪಡೆದಿದೆ. ದಕ್ಷಿಣೋತ್ತರವಾಗಿ ೩೨೧೪ ಕಿ.ಮೀ. ಹಾಗೂ ಪೂರ್ವ ಪಶ್ಚಿಮವಾಗಿ ೨೯೩೩ ಕಿ.ಮೀ. ಅಂತರ ಹೊಂದಿರುವ ಭಾರತ ೭೫೧೭ ಕಿ.ಮೀ. ಉದ್ದ ತೀರ ಪ್ರದೇಶ ಹೊಂದಿದೆ. ಏಷಿಯಾ ಖಂಡದಲ್ಲಿ ವಿಶಿಷ್ಠ ಸ್ಥಾನ ಪಡೆದಿರುವ ಭಾರತ ಭೌಗೋಳಿಕವಾಗಿ ತುಂಬಾ ಆಯಕಟ್ಟಿನ ಸ್ಥಾನದಲ್ಲಿದೆ.

ಸಮಶೀತೋಷ್ಣ ಹವಾಮಾನ ಹೊಂದಿರುವ ಭಾರತ ವಿಮಲ ನೈಸರ್ಗಿಕ ಮತ್ತು ಮಾನವ ಸಂಪತ್ತಿನೊಂದಿಗೆ ಬಡಜನರಿಂದ ಕೂಡಿದ ಶ್ರೀಮಂತ ರಾಷ್ಟ್ರ ಎಂದು ಬಣ್ಣಿಸಲ್ಪಟ್ಟಿದೆ. ವಿಶ್ವಮಟ್ಟದ ಆಗು ಹೋಗುಗಳಿಗೆ ಸದಾ ಸ್ಪಂದಿಸುತ್ತೆ. ತನ್ನ ಕ್ರಿಯಾತ್ಮಕತೆಯನ್ನು ಉಳಿಸಿಕೊಂಡಿರುವ ಭಾರತ ತನ್ನ ಮಡಿಲಲ್ಲಿರುವ ಗಂಭೀರ ಸಮಸ್ಯೆಗಳ ನಡುವೆಯೂ ತನ್ನ ಜೀವಂತಿಕೆಯನ್ನು ಪ್ರದರ್ಶಿಸುತ್ತಿದೆ.

ಭಾರತವು ಹಳ್ಳಿಗಳ ರಾಷ್ಟ್ರ ದೇಶದಲ್ಲಿ ಶೇಕಡಾ ೭೦ರಷ್ಟು ಜನರು ಗ್ರಾಮೀಣ ಪ್ರದೇಶದಲ್ಲಿ ವಾಸಿಸುತ್ತಿದ್ದು, "ಭಾರತದ ಆತ್ಮ ಹಳ್ಳಿಗಳಲ್ಲಿದೆ". ಎಂದು ಮಹಾತ್ಮಗಾಂಧೀಜಿಯವರು ಹೇಳಿದ್ದರು. ಒಂದು ಶತಮಾನದ ನಂತರವೂ ಈ ಮಾತು ಪ್ರಸ್ತುತ ಎನಿಸಿದೆ. ಭಾರತದ ಅಭಿವೃದ್ಧಿಯು ಅದರ ಗ್ರಾಮೀಣ ಪ್ರದೇಶಗಳ ಅಭಿವೃದ್ಧಿಯಲ್ಲಿ ಅಡಗಿದೆ. ದೇಶದ ಶೇ.೭೦ಕ್ಕೂ ಹೆಚ್ಚು ಜನರು ಗ್ರಾಮೀಣ ಪ್ರದೇಶಗಳಲ್ಲಿ ವಾಸಿಸುತ್ತಿರುವುದರಿಂದ ಗ್ರಾಮೀಣ ಪ್ರದೇಶಗಳಲ್ಲಿನ ಬಡತನ ನಿವಾರಿಸಿ ಉದ್ಯೋಗಗಳ ಅವಕಾಶ ಕಲ್ಪಿಸುವುದು ಮತ್ತು ಅಲ್ಲಿನ ಮೂಲ ಸೌಕರ್ಯಗಳನ್ನು ಹೆಚ್ಚಿಸಲು ಅನುವಾಗಬಲ್ಲ ಕಾರ್ಯ ನೀತಿಯನ್ನು ರೂಪಿಸುವುದೇ ನಮ್ಮ ಮುಂದಿರುವ ಸವಾಲಾಗಿದೆ. "ಗ್ರಾಮೀಣ ಅಭ್ಯುದಯ ರಾಷ್ಟ್ರೀಯ ಅಭಿವೃದ್ಧಿಯ ಕೀಲಿಕೈ" ಇದ್ದಂತೆ ಅದರಂತೆ ಅಭಿವೃದ್ಧಿಗೆ ಸಂಬಂಧಪಟ್ಟ ಯಾವುದೇ ಕಾರ್ಯನೀತಿ ಹಳ್ಳಿಗಳ ಸಾಮಾಜಿಕ ಮತ್ತು ಆರ್ಥಿಕ ಅಭಿವೃದ್ಧಿಯನ್ನು ಕೇಂದ್ರವಾಗಿಸಬೇಕು. ಇಂದು ಗ್ರಾಮೀಣ ಅಭಿವೃದ್ಧಿ ಎಂಬುದು ಇಡೀ ಆರ್ಥಿಕ ಮತ್ತು ಸಾಮಾಜಿಕ ವ್ಯವಸ್ಥೆಯ ಮರು ಸಂಘಟನೆ ಹೊಂದಿರುವ ಬಹು ಆಯಾಮವುಳ್ಳ ಪ್ರಕ್ರಿಯೆಯನ್ನಾಗಿ ಬಿಂಬಿಸಲಾಗುತ್ತಿದೆ. ಆದ್ದರಿಂದಲೇ ಗ್ರಾಮೀಣ ಅಭಿವೃದ್ಧಿಯು ಹೆಚ್ಚಿನ ಆದ್ಯತೆಯ ವಿಷಯವಾಗಿದೆ.

ಗ್ರಾಮೀಣ ಅಭಿವೃದ್ಧಿಯು ರಾಷ್ಟ್ರೀಯ ಅಭಿವೃದ್ಧಿಯ ಆಧಾರ ಸ್ತಂಭ. ದೇಶದಲ್ಲಿ ತೀವ್ರಗತಿಯ ನಗರೀಕರಣವಾಗಿದ್ದರೂ ಬಹುಪಾಲು ಜನರು ಇನ್ನೂ ಗ್ರಾಮಾಂತರ ಪ್ರದೇಶಗಳಲ್ಲಿಯೇ ವಾಸಿಸುತ್ತಿದ್ದಾರೆ. ಅಷ್ಟೇ ಅಲ್ಲ ಗ್ರಾಮೀಣ ಭಾರತ ಅನೇಕ ಚಾರಿತ್ರಿಕ ಕಾರಣಗಳಿಂದ ಅಭಿವೃದ್ಧಿ ಪಥದಲ್ಲಿ ಹಿಂದೆ ಬಿದ್ದಿದ್ದು, ಈ ಅಭಿವೃದ್ಧಿಯ ಅಸಮಾನತೆಗಳನ್ನು ತೊಡೆದು ಹಾಕಬೇಕಾಗಿದೆ. ನಗರ ಮತ್ತು ಹಳ್ಳಿಗಳ ನಡುವಿನ ಅಂತರ ಮತ್ತಷ್ಟು ಹೆಚ್ಚಾಗದಂತೆ ಜಾಗ್ರತೆ ವಹಿಸುವುದು ಇಂದಿನ ತುರ್ತು ಅಗತ್ಯವಾಗಿದೆ. ಶೀಘ್ರಗತಿಯ ಗ್ರಾಮೀಣ ಅಭಿವೃದ್ಧಿಯಾಗದ ಹೊರತು ರಾಷ್ಟ್ರದ ಅಭಿವೃದ್ಧಿ ಸಾಧ್ಯವಿಲ್ಲ.

ಬಡತನ ನಿವಾರಣೆಗೂ ಉದ್ಯೋಗ ಮತ್ತು ಅಭಿವೃದ್ಧಿಗೂ ಪರಸ್ಪರ ಸಂಬಂಧವಿದೆ. ದೇಶದಲ್ಲಿ ಗ್ರಾಮೀಣ ನಿರುದ್ಯೋಗ ಒಂದು ದೊಡ್ಡ ಸಮಸ್ಯೆಯಾಗಿದ್ದು ದುಡಿಯುವ ಸಾಮರ್ಥ್ಯ ಮತ್ತು ಸಮಯಕ್ಕೆ ತಕ್ಕಂತೆ ಉದ್ಯೋಗ ನೀಡುವುದು ಇಂದಿನ ಅಗತ್ಯವಾಗಿದೆ. ಸ್ವಾತಂತ್ರ್ಯ ನಂತರ ಭಾರತದಲ್ಲಿ ಬಡತನ ನಿವಾರಣಾ ಕಾರ್ಯಕ್ರಮಗಳಿಗೆ ಹೆಚ್ಚು ಒತ್ತು ನೀಡಲಾಗಿದೆ. ಬಡತನವನ್ನು ನಿವಾರಿಸಲು ಗ್ರಾಮೀಣ ನಿರುದ್ಯೋಗ ನಿವಾರಿಸಲು ಅಸಮಾನತೆ ಅಂಧಕಾರ ತೊಲಗಿಸಲು ಜನತೆಯ ಅಪೇಕ್ಷೆಗೆ ಅನುಗುಣವಾಗಿ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಬೇಕು. ಬಡತನ ನಿರುದ್ಯೋಗ ನಿರ್ಮೂಲನೆ ವಿಚಾರವು ಆರ್ಥಿಕ

ಸಿದ್ದಾಂತದ ಅವಿಭಾಜ್ಯ ಅಂಗವಾಗಿ ಮಾರ್ಪಟ್ಟಿದೆ. "ಈ ದೇಶದ ಕಡು ಬಡವರು ಹಸಿವಿನ ಯಾತನೆ ಮತ್ತು ನರಳುವಿಕೆಯಿಂದ ಮುಕ್ತರಾದಾಗ ಮಾತ್ರ ಭಾರತ ನಿಜವಾದ ಸ್ವಾತಂತ್ರ್ಯವನ್ನು ಹೊಂದುತ್ತದೆ" ಎಂದು ಮಹಾತ್ಮಗಾಂಧೀಜಿಯವರು ಹೇಳಿದ ಮಾತಿನಂತೆ ಸಾಧಿಸಬೇಕಿದ್ದರೆ ನಿರುದ್ಯೋಗದ ಪ್ರಮಾಣವನ್ನು ಕಡಿಮೆ ಮಾಡಬೇಕು. ಅಂದರೆ ದುಡಿಯಲು ಶಕ್ತಿ ಇರುವ ಜನರಿಗೆ ದುಡಿದು ಸಂಪಾದಿಸಲು ಅವಕಾಶಗಳನ್ನು ಕಲ್ಪಿಸಿಕೊಡಬೇಕು. ಆರ್ಥಿಕ ಅಭಿವೃದ್ದಿಯ ವೇಗವನ್ನು ಹೆಚ್ಚಿಸುವ ದೃಷ್ಠಿಯಿಂದ ಲಭ್ಯವಿರುವ ದುಡಿಯುವ ವರ್ಗವನ್ನು ಪೂರ್ಣ ಪ್ರಮಾಣದಲ್ಲಿ ಬಳಸಿಕೊಳ್ಳುವ ಅವಶ್ಯಕತೆ ಇದೆ.

ಮಾನವಾಭಿವೃದ್ಧಿ ಆಗಬೇಕಾದರೆ ಜನರ ಆಯ್ಕೆಗಳನ್ನು ವಿಶಾಲಗೊಳಿಸಬೇಕಿದೆ. ಸಮಾಜದ ಅಭಿವೃದ್ಧಿ ದೃಷ್ಠಿಯಿಂದ ಜನರು ಆರ್ಥಿಕವಾಗಿ ಸದೃಡರಾಗಬೇಕು. ದೇಶದಲ್ಲಿ ಬಡತನ ಸಂಪೂರ್ಣವಾಗಿ ನಿರ್ಮೂಲನೆ ಆಗಿ, ಜನರ ಜೀವನ ಮಟ್ಟ ಸುಧಾರಣೆಯಾಗಬೇಕು. ಬಡತನ ನಿವಾರಣೆ ಮಾಡುವ ನಿಟ್ಟಿನಲ್ಲಿ ನಿರುದ್ಯೋಗ ನಿವಾರಣೆ ಆಗಬೇಕು. ದುಡಿದು ಗಳಿಸಲೇಬೇಕಾದ ವಯೋಮಿತಿಯ ಜನರಿಗೆ ದುಡಿದು ಸಂಪಾದಿಸಲು ಸಾಕಷ್ಟು ಅವಕಾಶ ಕಲ್ಪಿಸುವ ಮೂಲಕ ಬಡತನ ನಿವಾರಣೆ ಮಾಡಬೇಕಾಗಿದೆ. ಒಂದು ಕುಟುಂಬದ ವಾರ್ಷಿಕ ಆದಾಯ ರೂ. ೧೯,೨೬೧/-ಕ್ಕಿಂತ ಕಡಿಮೆ ಇದ್ದರೆ ಅವರನ್ನು ಬಡತನ ರೇಖೆಗಿಂತ ಬಿ.ಪಿ.ಎಲ್. ಕೆಳಗೆ ಇರುವವರು ಎಂದು ಗುರುತಿಸಲಾಗಿದೆ. ಓರ್ವ ವ್ಯಕ್ತಿ ಪ್ರತಿದಿನ ಗ್ರಾಮಾಂತರ ಪ್ರದೇಶದವರಿಗೆ ೨೪೦೦ ಕ್ಯಾಲರಿ ಹಾಗೂ ನಗರ ಪ್ರದೇಶದ ಜನರಿಗೆ ೨,೧೦೦ ಕ್ಯಾಲರಿ (೫೦೦ ರಿಂದ ೬೦೦ ಗ್ರಾಂ ಧಾನ್ಯ) ಪ್ರಮಾಣದ ಪೌಷ್ಠಿಕ ಆಹಾರ ಪಡೆಯಲು ಸಾಧ್ಯವಾಗದಿದ್ದರೆ, ಅಂತಹವರನ್ನು ಬಡತನ ರೇಖೆಗಿಂತ ಕೆಳಗೆ ಇರುವವರು ಎಂದು ಪರಿಗಣಿಸಲಾಗುತ್ತದೆ. ಇದಕ್ಕೆ ಪರಿಹಾರ ಸಂಪೂರ್ಣ ಉದ್ಯೋಗ ನೀಡುವುದೇ ಆಗಿದೆ.

ಬಡತನದ ಕಾರಣಗಳನ್ನು ಹೇಳುವಾಗಲೂ ಅನಕ್ಷರತೆ ಬೇರೆ ಬೇರೆ ಮನೋಭಾವಗಳನ್ನು ಕಾಣುತ್ತೇವೆ. ಸೋಮಾರಿತನ, ದುಶ್ಚಟಗಳು, ಹೆಚ್ಚು ಮಕ್ಕಳನ್ನು ಹೊಂದಿರುವುದು, ಉಳಿತಾಯ ಮಾಡದೆ ಇರುವುದು, ಭವಿಷ್ಯದ ಕುರಿತು ಯೋಚನೆ ಮಾಡದಿರುವುದು ಬಡತನಕ್ಕೆ ಕಾರಣವೆಂದು ತಿಳಿಯಬಹುದು. ಸಾಮಾಜಿಕ,ಸಾಂಸ್ಕೃತಿಕ, ಆರ್ಥಿಕ, ರಾಜಕೀಯ, ಅಸಮಾನತೆ, ಸಂಪತ್ತು, ಸೌಲಭ್ಯಗಳು ಮತ್ತು ಅವಕಾಶಗಳ ಅಸಮಾನ ಹಂಚಿಕೆ ಇವೂ ಕೂಡ ಬಡತನಕ್ಕೆ ಕಾರಣಗಳಾಗಿದೆ. ಭೂಮಿ ಇಲ್ಲದಿರುವುದು, ಕಡಿಮೆ ಭೂಮಿ ಇರುವುದು, ಇರುವ ಭೂಮಿಯಲ್ಲಿ ಕಡಿಮೆ ಉತ್ಪಾದಿಸುವುದರಿಂದ ಆದಾಯ ಕಡಿಮೆಯಾಗುತ್ತಿರುವುದು. ಸಾಕಷ್ಟು ಪೌಷ್ಠಿಕ ಆಹಾರ ಸೇವಿಸದೆ ಆರೋಗ್ಯ ಸ್ಥಿತಿ ಕಡಿಮೆ ಇರುವುದು, ಮಾನಸಿಕ ಸ್ಥಿತಿ ಸರಿಯಿಲ್ಲದಿರುವುದು, ಶಿಕ್ಷಣ ಪಡೆಯದೆ ಇರುವುದರಿಂದ ಕೌಶಲ್ಯ ಕಡಿಮೆ ಇರುವುದು ದುಡಿಯುವ

ಕೈಗಳಿಗೆ ಉದ್ಯೋಗ ಇಲ್ಲದೆ ಇರುವುದು, ದುಡಿದವರಿಗೆ ಕಡಿಮೆ ವೇತನ ನೀಡುವುದು ಮತ್ತು ಜನಗಳ ನಡುವೆ ಸಂಪರ್ಕದ ಕೊರತೆ ಮುಂತಾದ ಕಾರಣಗಳಿಂದ ಬಡತನ ಇನ್ನೂ ಜೀವಂತವಾಗಿದೆ.

ಸಾಮಾಜಿಕ, ಆರ್ಥಿಕ, ರಾಜಕೀಯ ಅಸಮಾನತೆಗಳ ನಿವಾರಣೆ, ಲಿಂಗ ತಾರತಮ್ಯ ಹೋಗಲಾಡಿಸುವುದು ಸಮಾನ ಅವಕಾಶ ನೀಡುವ ಮೂಲಕ ಮಹಿಳೆಯರು ಮತ್ತು ಮಕ್ಕಳು ಪೌಷ್ಠಿಕ ಆಹಾರ ಪಡೆಯಲು ಸಾಮಾಜಿಕ ನಿರ್ಧಾರಗಳನ್ನು ತೆಗೆದುಕೊಳ್ಳಲು ಶಿಕ್ಷಣ ಮತ್ತು ಗರಿಷ್ಟ ಮಹತ್ವದ ಆರೋಗ್ಯದ ಸೌಲಭ್ಯಗಳನ್ನು ಪಡೆಯುವುದರ ಜೊತೆಗೆ ರಾಜಕೀಯದಲ್ಲಿ ಪಾಲ್ಗೊಳ್ಳುವಂತಾಗಬೇಕು. ಎಲ್ಲಾ ವರ್ಗದ ಜನರು ಪ್ರಜಾಪ್ರಭುತ್ವದ ಎಲ್ಲಾ ಪ್ರಕ್ರಿಯೆಗಳಲ್ಲಿ ಭಾಗವಹಿಸಿ ನಿರ್ಧಾರಗಳನ್ನು ತೆಗೆದುಕೊಳ್ಳುವ ಸಮಾನ ಅವಕಾಶ ಪಡೆದುಕೊಂಡಾಗ ಮಾತ್ರ ಬಡತನ ನಿವಾರಣೆಯಾಗಿ ಅಭಿವೃದ್ಧಿಯನ್ನು ಹೊಂದಲು ಸಾಧ್ಯವಾಗುತ್ತದೆ. ೧೯೪೭ ರಲ್ಲಿ ಪ್ರಥಮ ಪ್ರಧಾನಮಂತ್ರಿಯಾದ ಜವಾಹರ್‌ಲಾಲ್ ನೆಹರು (ಅವರು ಪ್ರಮಾಣ ವಚನ ಸ್ವೀಕರಿಸಿದ ಸಂದರ್ಭದಲ್ಲಿ) "ಬಡತನ ಮತ್ತು ನಿರ್ಲಕ್ಷ್ಯದ ನಿವಾರಣೆ ಜೀವಂತ ಸಾಂಕ್ರಾಮಿಕ ಕಾಯಿಲೆಗಳಿಂದ ಮುಕ್ತಿ ಹಾಗೂ ಎಲ್ಲಾ ವರ್ಗದ ಜನರಿಗೂ ಅವಕಾಶಗಳು ಲಭ್ಯವಾಗುವಂತೆ ನೋಡಿಕೊಳ್ಳುವುದು ನಮ್ಮ ಗುರಿ" ಎಂದು ತಿಳಿಸಿದ್ದರು. ಈಗ ಜಾರಿಗೆ ಬಂದಿರುವ ಉದ್ಯೋಗ ಖಾತರಿ ಕಾನೂನು ಇದಕ್ಕೆ ಸರಿಯಾದ ಪರಿಹಾರ ಮಾರ್ಗವಾಗಿದೆ, ಎಂದು ತಿಳಿದುಕೊಳ್ಳಬಹುದು.

ಗ್ರಾಮೀಣ ಜನರು ಅಧಿಕ ಸಂಖ್ಯೆಯಲ್ಲಿದ್ದು ಬಹುಪಾಲು ಹಳ್ಳಿಗಳಲ್ಲೇ ವಾಸಿಸುತ್ತಿದ್ದಾರೆ. ಗ್ರಾಮೀಣ ವಲಯ ಭಾರತದ ಆರ್ಥಿಕ ಚಟುವಟಿಕೆಯ ಪ್ರಮುಖ ವಲಯವೆಂದು ಪರಿಗಣಿಸಲ್ಪಟ್ಟಿದೆ. ಗ್ರಾಮೀಣ ಜನರ ಪ್ರಗತಿಯಿಂದ ಕುಟುಂಬಕ್ಕೆ ಹಾಗೂ ದೇಶದ ಪ್ರಗತಿಗೆ ಅನುಕೂಲವಾಗುತ್ತದೆ. ಗ್ರಾಮೀಣ ವಲಯದ ಸುಧಾರಣೆಯು ದೇಶದ ನಿಜವಾದ ಸುಧಾರಣೆ ಎಂದು ಮಹಾತ್ಮ ಗಾಂಧೀಜಿ ಹೇಳಿದರು. ಅನಕ್ಷರಸ್ಥ, ಬಡ ಮುಗ್ಧ ಗ್ರಾಮೀಣರನ್ನು ಸಮಾಜದ ಮುಖ್ಯವಾಹಿನಿಗೆ ತರಬೇಕು. ಗ್ರಾಮೀಣ ಅಭಿವೃದ್ಧಿಗಾಗಿ ಮಾಡಲ್ಪಡುವ ಎಲ್ಲಾ ಪ್ರಯತ್ನಗಳು ಮಾನವ ಸಮಾಜದ ಸರ್ವತೋಮುಖ ಅಭಿವೃದ್ಧಿಯನ್ನು ಉಂಟು ಮಾಡುತ್ತದೆ. ದೇಶದ ಅಭಿವೃದ್ಧಿಗೆ ಮಾನವ ಸಂಪನ್ಮೂಲವನ್ನು ಪೂರ್ಣ ಮತ್ತು ಗರಿಷ್ಠ ಪ್ರಮಾಣದಲ್ಲಿ ಬಳಸಿಕೊಳ್ಳಬೇಕಾಗಿರುವುದರಿಂದ ಗ್ರಾಮೀಣ ಪ್ರದೇಶದ ಜನರ ಪೂರ್ಣ ಬಳಕೆಯಾಗುವುದರ ಮೂಲಕ ಗ್ರಾಮೀಣ ಜನರನ್ನು ಮುಖ್ಯ ವಾಹಿನಿಗೆ ತರಬೇಕಾಗಿದೆ. ಗ್ರಾಮೀಣ ಪ್ರದೇಶಗಳ ಅಭಿವೃದ್ಧಿಗೆ ವರದಾನವಾಗಿ ಬಂದಿರುವ ಉದ್ಯೋಗ ಭರವಸೆ ಯೋಜನೆಗಳ ಸಮರ್ಪಕ ಅನುಷ್ಠಾನ ಮೊದಲ ಆದ್ಯತೆ ಆಗಬೇಕು.

## ೧.೨. ಸ್ವರೂಪ ಮತ್ತು ಉದ್ದೇಶಗಳು

ಭಾರತವು ಗ್ರಾಮೀಣ ಕ್ಷೇತ್ರದ ಪ್ರಾಬಲ್ಯ ಹೊಂದಿರುವ ದೇಶ ಶೇ. ೭೭ ರಷ್ಟು ಜನರು ಹಳ್ಳಿಗಳಲ್ಲಿ ವಾಸಿಸುತ್ತಿದ್ದಾರೆ. ಹಳ್ಳಿಗಳು ದೇಶದ ಬೆನ್ನೆಲುಬು ಇದ್ದಂತೆ ಎಂಬುದು ನಿಜ. ಆದರೆ ಬಹುತೇಕ ಸೌಲಭ್ಯಗಳಿಂದ ವಂಚಿತವಾಗಿರುವ ಹಳ್ಳಿಗಳು ದೇಶದ ಪ್ರಗತಿಗೆ ಸರಿಯಾದ ಕೊಡುಗೆ ಸಲ್ಲಿಸಲು ಅಸಮರ್ಥವಾಗಿವೆ. ಪ್ರಾದೇಶಿಕ ಅಸಮಾನತೆಯನ್ನು ತಗ್ಗಿಸುವ ಗ್ರಾಮೀಣ ಆರ್ಥಿಕತೆಯನ್ನು ಸುಧಾರಿಸುವ ಮತ್ತು ಗ್ರಾಮವಾಸಿ ಬಡಜನತೆಯ ಜೀವನ ಮಟ್ಟವನ್ನು ಉತ್ತಮಪಡಿಸುವ ಉದ್ದೇಶದಿಂದ ಸ್ವತಂತ್ರ ಭಾರತದಲ್ಲಿ ಹಲವಾರು ಗ್ರಾಮೀಣ ಅಭಿವೃದ್ಧಿ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗಿದೆ.

ಸ್ವಾತಂತ್ರ್ಯಪೂರ್ವದಲ್ಲಿ ದೇಶದ ವಿವಿಧ ಭಾಗಗಳಲಿ ಕೆಲವು ವ್ಯಕ್ತಿ ಮತ್ತು ಸಂಸ್ಥೆಗಳಿಂದ ಗ್ರಾಮೀಣ ಅಭಿವೃದ್ಧಿಗಾಗಿ ಹಲವಾರು ಪ್ರಯತ್ನಗಳು ಪಡೆದವು. ಮಹಾತ್ಮಾಗಾಂಧಿಯವರು ಸೇವಾ ಗ್ರಾಮದಲ್ಲಿ ಕೈಗೊಂಡ ಕಾರ್ಯಗಳು ರವೀಂದ್ರನಾಥ ಟ್ಯಾಗೋರರು ಶಾಂತಿನಿಕೇತನದಲ್ಲಿ ಮಾಡಿದ ಕೆಲಸಗಳು ಉದಾಹರಣೆಗಳಾಗಿವೆ.

ಭಾರತದ ಜೀವಾಳ ಗ್ರಾಮೀಣ ಪ್ರದೇಶಗಳಲ್ಲಿದೆ. ಈ ಸಂಗತಿ ನಮ್ಮ ಯೋಜನೆ ರೂಪಿಸುವವರನ್ನು ಗ್ರಾಮೀಣ ಆರ್ಥಿಕ ಹಿಡಿತ ಪುನರ್‌ರಚಿಸಲು ಮತ್ತು ಸಾಮಾಜಿಕ ಅರಿವನ್ನುಂಟು ಮಾಡುವಂತಹ ಫಲಪ್ರದ ಯೋಜನೆಗಳನ್ನು ರೂಪಿಸಲು ಪ್ರೇರೇಪಿಸಿದೆ. ಗ್ರಾಮೀಣ ಜನತೆಯು ಅರ್ಥ ವ್ಯವಸ್ಥೆಯಲ್ಲಿ ವಿಶಿಷ್ಟವಾದ ಸ್ಥಾನ ಹೊಂದಿದ್ದಾರೆ.

ಭಾರತವು ಸ್ವಾತಂತ್ರ್ಯನಂತರ ಭಾರತವನ್ನು ಅಭಿವೃದ್ಧಿ ಪಥದತ್ತ ಕೊಂಡ್ಯೊಯ್ಯಲು ಅದರಲ್ಲೂ ಭಾರತದ ಆತ್ಮ ಹಾಗೂ ಜೀವಾಳವಾಗಿರುವಂತಹ ಗ್ರಾಮಾಂತರ ಪ್ರದೇಶಗಳ ಅಭಿವೃದ್ಧಿಗಾಗಿ ಪಂಚವಾರ್ಷಿಕ ಯೋಜನೆ ಮತ್ತು ವಾರ್ಷಿಕ ಯೋಜನೆಯ ಮೂಲಕ ಹಲವು ಜನಪರ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಯಶಸ್ವಿಯತ್ತ ನಡೆಯುತ್ತಾ ಬಂದಿದೆ. ಅಂತಹ ಜನಪರ ಕಾರ್ಯಕ್ರಮಗಳಲ್ಲಿ "ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯ ಆರ್ಥಿಕ ಮತ್ತು ಆರ್ಥಿಕೇತರ ಪರಿಣಾಮಗಳು ಒಂದು ಪ್ರಕರಣದ ಅಧ್ಯಯನ" ಇದೂ ಸಹ ಒಂದಾಗಿದ್ದು ದಿನೇ ದಿನೇ ಮಿಂಚಿನ ವೇಗದಲ್ಲಿ ಹೆಚ್ಚುತ್ತಿರುವ ಜನಸಂಖ್ಯೆ ಎಷ್ಟೇ ಜನಪರ ಕಾರ್ಯಕ್ರಮಗಳನ್ನು ಹಮ್ಮಿಕೊಂಡರೂ ಜನಸಂಖ್ಯೆ ಎಂಬ ಪೆಡಂಭೂತವು ನುಂಗಿ ಹಾಕುತ್ತಿದೆ. ಈ ಯೋಜನೆಯ ಸ್ವರೂಪವು ೨೦೦೫ರಲ್ಲಿ ಪ್ರಾರಂಭವಾಗಿ ದಿನೇ ದಿನೇ ಸ್ವರೂಪವನ್ನು ಹೆಚ್ಚಿಸಿಕೊಳ್ಳುತ್ತಿದೆ.

ನಿರುದ್ಯೋಗವನ್ನು ನಿವಾರಿಸುವ ಸಲುವಾಗಿ ಕೈಗೊಂಡಂತಹ ಅಧ್ಯಯನವು ಗ್ರಾಮೀಣ ಜನತೆಯ ಮೇಲೆ ಆರ್ಥಿಕವಾಗಿ ಮತ್ತು ಆರ್ಥಿಕೇತರವಾಗಿ ಯಾವ ರೀತಿಯಲ್ಲಿ ಪರಿಣಾಮ ಬೀರಿದೆ ಎಂಬುದನ್ನು ಅರಿತುಕೊಳ್ಳಲು ಕೈಗೊಂಡುದುದಾಗಿದೆ. ಈ ಮಹತ್ವಾಕಾಂಕ್ಷಿ ಯೋಜನೆಯಿಂದ ಗ್ರಾಮೀಣ ಜನತೆಯು ಎಷ್ಟರಮಟ್ಟಿಗೆ ಸಬಲೀಕರಣ ಎನ್ನುವ ಇಂದಿನ ಪರಿಕಲ್ಪನೆಗೆ ಸಾಹಿತ್ಯ ಒದಗಿಸುತ್ತಿದ್ದಾರೆ ಎಂಬುದನ್ನು ತಿಳಿಯಲು ನೆರವಾಗಲಿದೆ.

**ಈ ಕೆಳಕಂಡ ಪ್ರಮುಖ ಉದ್ದೇಶಗಳನ್ನು ಮುಂದಿಟ್ಟುಕೊಂಡು ಈ ಯೋಜನೆಯನ್ನು ಕೈಗೊಳ್ಳಾಗಿದೆ.**

೧. ಸ್ವ ಇಚ್ಛೆಯಿಂದ ಅರ್ಜಿ ಸಲ್ಲಿಸುವ ಅಕುಶಲ ದೈಹಿಕ ಕೆಲಸ ಬಯಸುವ ಗ್ರಾಮೀಣ ಪ್ರದೇಶದ ವಯಸ್ಕ ಸದಸ್ಯರ ಪ್ರತಿ ಕುಟುಂಬಕ್ಕೆ ಒಂದು ಆರ್ಥಿಕ ವರ್ಷದಲ್ಲಿ ೧೦೦ ಮಾನವ ದಿನಗಳ ಉದ್ಯೋಗವನ್ನು ಒದಗಿಸಿ ಅವರ ಜೀವನಕ್ಕೂ ಭದ್ರತೆ ನೀಡುವುದಾಗಿದೆ.

೨. ದೀರ್ಘಕಾಲ ಬಳಕೆಗೆ ಬರುವ ಆಸ್ತಿಗಳನ್ನು ಸೂಚಿಸುವುದು.

೩. ಗ್ರಾಮೀಣ ಜನತೆಗೆ ದೀರ್ಘಕಾಲದ ಜೀನೋಪಾಯದ ಮಾರ್ಗಗಳನ್ನು ಬಲಪಡಿಸುವುದು.

೪. ಗ್ರಾಮೀಣ ಮಹಿಳೆಯರ ಸಬಲೀಕರಣ ಮತ್ತು ವಲಸೆ ಹೋಗುವುದನ್ನು ತಪ್ಪಿಸುವುದು.

೫. ಗ್ರಾಮೀಣ ಪ್ರದೇಶದಲ್ಲಿರುವ ಪ್ರತಿಯೊಂದು ಕುಟುಂಬಕ್ಕೆ ಒಬ್ಬನಿಗೆ ದಿನಗೂಲಿ ಆಧಾರದ ಮೇಲೆ ಉದ್ಯೋಗ ಒದಗಿಸುವ ಭರವಸೆಕೊಡುತ್ತದೆ.

೬. ತಾಂತ್ರಿಕವಲ್ಲದ ಯಾವುದೇ ದೈಹಿಕಶ್ರಮದಿಂದ (ಅಕುಶಲ) ಕೂಡಿದ ಕೆಲಸ ಮಾಡಲು ಸಿದ್ದವಿರುವ ವಯಸ್ಕ ವ್ಯಕ್ತಿ ಇದಕ್ಕೆ ಅರ್ಹನಾಗಿರುತ್ತಾನೆ.

೭. ಬಡತನ ರೇಖೆಗಿಂತ ಕೆಳಗಿರುವ ಕುಟುಂಬಗಳಿಗೆ ಪ್ರಥಮ ಆದ್ಯತೆ ನೀಡುವುದು.

ಈ ಮೇಲಿನ ಮಹತ್ವದ ಉದ್ದೇಶಗಳನ್ನು ಮುಂದಿಟ್ಟುಕೊಂಡು ಈ ಯೋಜನೆಯು ಅಸ್ತಿತ್ವಕ್ಕೆ ಬಂದಿತು.

## ೧.೩. ಅಧ್ಯಯನದ ಮಹತ್ವ ಅಥವಾ ಪ್ರಾಮುಖ್ಯತೆ

ಆರ್ಥಿಕ ಅಭಿವೃದ್ಧಿಯಲ್ಲಿ ಗ್ರಾಮೀಣ ಜನತೆಯು ಭಾಗವಹಿಸುವಿಕೆಯ ಪ್ರಮಾಣವು ದಿನೇ ದಿನೇ ಹೆಚ್ಚುತ್ತಿದ್ದು ಆಧುನಿಕ ಯುಗದಲ್ಲಿ ಇದರ ಅಧ್ಯಯನವು ತುಂಬಾ ಮಹತ್ವಪೂರ್ಣದಾಯಕವಾಗಿದೆ. ಪ್ರಸ್ತುತ ಅಧ್ಯಯನವು ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯಿಂದ ಗ್ರಾಮೀಣ ಜನತೆಯ ಜೀವನಮಟ್ಟ ಸಾಮಾಜಿಕವಾಗಿ, ಆರ್ಥಿಕವಾಗಿ, ಶೈಕ್ಷಣಿಕವಾಗಿ ರಾಜಕೀಯವಾಗಿ ಸುಧಾರಣೆ ಆಗಿದೆಯೇ?,

ಗ್ರಾಮಾಂತರ ಪ್ರದೇಶಗಳಿಂದ ನಗರ ಪ್ರದೇಶಗಳಿಗೆ ಹೋಗುವಂತಹ ವಲಸೆಯು ತಪ್ಪಿದೆಯೇ? ಇನ್ನೂ ಅನೇಕ ಮಹತ್ವಪೂರ್ಣ ವಿಚಾರಗಳನ್ನು ಆಳವಾಗಿ ಅಧ್ಯಯನ ಮಾಡುವಂತಹ ಪ್ರಯತ್ನ ಇದಾಗಿದೆ.

ಮಹಾತ್ಮಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯು ಜನತೆಯ ಆರ್ಥಿಕ ಗುಣಮಟ್ಟವನ್ನು ಹೆಚ್ಚಿಸುವುದರ ಮೂಲಕ ಜನತೆಯ ಕ್ಷೇಮಾಭಿವೃದ್ಧಿಯನ್ನು ಹೆಚ್ಚಿಸುತ್ತದೆ. ಇದರಿಂದ ಗ್ರಾಮೀಣ ಜನತೆಯು ಉತ್ತಮ ಪೌಷ್ಠಿಕ ಆಹಾರ, ಹರ್ಷದಾಯಕವಾದಂತಹ ಆರೋಗ್ಯ ಉತ್ತಮ ರೀತಿಯ ಸಾರಿಗೆ ಸೌಲಭ್ಯ ಗುಣಮಟ್ಟದ ದಕ್ಷಿಣ ಸ್ವಚ್ಚಂದ ಪರಿಸರವನ್ನು ಪಡೆಯಲು ಈ ಯೋಜನೆಯು ಸಾಕಷ್ಟು ಮಾರ್ಗಗಳಲ್ಲಿ ನೆರವಾಗುತ್ತದೆ. ಈ ನಿಟ್ಟಿನಲ್ಲಿ ಈ ಯೋಜನೆಯ ಅಧ್ಯಯನವು ಅತ್ಯಂತ ಮಹತ್ವಪೂರ್ಣವಾದುದಾಗಿದೆ. ಗ್ರಾಮೀಣ ಜನತೆಗೆ ನಿರುದ್ಯೋಗವನ್ನು ನಿವಾರಿಸಿ ಸಂಪೂರ್ಣ ಉದ್ಯೋಗವನ್ನು ನೀಡುವ ಮೂಲಕ ಅವರ ಆರ್ಥಿಕ ಸಬಲೀಕರಣಕ್ಕೆ ದಾರಿಮಾಡಿಕೊಟ್ಟಾಗ ಸಾಮಾಜಿಕ ಸಬಲೀಕರಣ ತನ್ನಿಂದ ತಾನೇ ಸಾಧ್ಯವಾಗುತ್ತದೆ.

ದೇಶದ ಅಭಿವೃದ್ಧಿಗೆ ಮಾನವ ಸಂಪತ್ತನ್ನು ಅದರಲ್ಲೂ ಯುವ ಸಂಪತ್ತಿನ ಪೂರ್ಣ ಗರಿಷ್ಠ ಪ್ರಮಾಣದಲ್ಲಿ ಬಳಸಿಕೊಂಡಾಗ ರಾಷ್ಟ್ರ ಉದ್ಧಾರವಾಗುವುದರಲ್ಲಿ ಎರಡು ಮಾತಿಲ್ಲ. ಆದುದರಿಂದ ಪ್ರಸ್ತುತ ಇದರ ಅಧ್ಯಯನದ ಮಹತ್ವ ಹೆಚ್ಚಿದೆ ಎಂದು ಹೇಳಬಹುದು.

# ಅಧ್ಯಾಯ – ೨

## ಸಂಶೋಧನಾ ಮಾದರಿಗಳು, ಅರ್ಥ, ವಿಷಯದ ವ್ಯಾಪ್ತಿ, ಮಿತಿಗಳು, ವಿಧಾನಗಳು ಮತ್ತು ಅಧ್ಯಾಯಗಳ ಪರಿಚಯ

# ಅಧ್ಯಾಯ – ೨

# ಸಂಶೋಧನಾ ಮಾದರಿಗಳು, ಅರ್ಥ, ವಿಷಯದ ವ್ಯಾಪ್ತಿ, ಮಿತಿಗಳು, ವಿಧಾನಗಳು ಮತ್ತು ಅಧ್ಯಾಯಗಳ ಪರಿಚಯ

## ೨.೧. ಪ್ರವೇಶ

ಸಂಶೋಧನೆಯು ಮಾನವನ ಬೌದ್ಧಿಕ ಚಿಂತನೆಯಷ್ಟೇ ಹಳೆಯದು. ಪ್ರಾಚೀನ ಕಾಲದಿಂದಲೂ ಆತನು ತನ್ನ ಸ್ಥಿತಿಯ ಹಿನ್ನೆಲೆ, ವಸ್ತು, ಪ್ರಾಣಿ, ಪಕ್ಷಿ, ಸಸ್ಯರಾಶಿ ಬೆಳವಣಿಗೆ, ವಿಕಾಸವನ್ನು ಅರಿಯಲು ಪ್ರಯತ್ನಿಸುತ್ತಾ ಬಂದಿದ್ದಾನೆ. ಹಿಂದಿನ ಮಾನವನ ಈ ದಿಸೆಯ ಪ್ರಯತ್ನ ವ್ಯವಸ್ಥಿತವಾಗಿರಲಿಲ್ಲ. ಆತನ ಚಿಂತನೆಯು ಅವೈಚಾರಿಕ ನಂಬಿಕೆಗಳು, ಅಂಧಶ್ರದ್ಧೆ, ಕಂದಾಚಾರಗಳ ಕಪಿಮುಷ್ಟಿಯಲ್ಲಿತ್ತು.ಅವುಗಳಿಂದ ಆತನ ಅನೇಕ ಕಷ್ಟ–ನಷ್ಟ ಅನುಭವಿಸಿದನು. ತಾನು ಬದುಕುವುದಕ್ಕಾಗಿ, ತನ್ನ ಅಸ್ತಿತ್ವ ಉಳಿಸಿಕೊಳ್ಳುವುದಕ್ಕಾಗಿ ಪ್ರಕೃತಿಯಲ್ಲಿ ನಡೆಯುವ ವಿಸ್ಮಯವನ್ನು ಸತ್ಯವನ್ನು ಅರಿಯಲೆತ್ನಿಸಿದನು. ಕಾಲಾನಂತರ ವೈಚಾರಿಕವಾಗಿ ಹಾಗೂ ವೈಜ್ಞಾನಿಕವಾಗಿ ಚಿಂತಿಸತೊಡಗಿದನು ಮತ್ತು ಅನ್ವೇಷಣೆ ಮಾಡತೊಗಿದನು.

ಹೊಸ ವಿಷಯಗಳ ಸಂಶೋಧನೆಯನ್ನು ಮಾನವ ಮಾಡತೊಡಗಿದನು. ಹಳೆಯದಾದ ವಿಚಾರಗಳನ್ನು ಪುನರ್ ಪರಿಶೀಲನೆ ಮಾಡತೊಡಗಿದನು. ತಾನು ಕಂಡದ್ದನ್ನು ನೋಡಿದ್ದನ್ನು ಗ್ರಹಿಸಿದ್ದನ್ನು ವ್ಯಾಖ್ಯಾನ ಮಾಡಲು ತೊಡಗಿದನು. ಪುನರ್ ವ್ಯಾಖ್ಯಾನ ಮಾಡತೊಗಿದನು. ತನ್ನ ಹೊಸ ಹೊಸ ಚಿಂತನೆಯ ಫಲವಾಗಿ 'ಸಂಶೋಧನ ಯುಗ' ಪ್ರಾರಂಭವಾಯಿತು. ಸಾಕ್ರಟಿಸ್, ಪ್ಲೇಟೋ, ಅರಿಸ್ಟಾಟಲ್, ನಿಕೋಲಸ್, ಕೋಪರ್ನಿಕಸ್, ಗೆಲಿಲಿಯೋ, ನ್ಯೂಟನ್, ಡಾರ್ವಿನ್, ಸರ್ ಥಾಮಸ್ ಮೋರೆ, ಮೆಕೈವಲ್ಲಿ, ಸರ್ ಫ್ರಾನ್ಸಿಸ್ ಗಾಲ್ಟನ್, ರೂಸೋ, ಕಾರ್ಲ್‌ಮಾರ್ಕ್ಸ್, ಮ್ಯಾಕ್ಸ್‌ವೇಬರ್ ಮುಂತಾದ ಚಿಂತಕರು ಹುಟ್ಟಿಕೊಂಡರು. ಇವರಿಂದ ಸಾಮಾಜಿಕ ಚಿಂತನೆಯು ಬೆಳೆಯಲು ಪ್ರಾರಂಭವಾಯಿತು.

## ೨.೨. ಆರ್ಥಿಕ ಸಂಶೋಧನೆಯ ಅರ್ಥ

**ಸಂಶೋಧನೆ ಎಂದರೇನು?**

ಸಂಶೋಧನೆಯನ್ನು ಆಂಗ್ಲ ಭಾಷೆಯಲ್ಲಿ 'Research' ಎನ್ನುತ್ತೇವೆ 'Re' ಅಂದರೆ ಪುನಃ Search' ಅಂದರೆ ಹುಡುಕು, 'ಪುನಃ ಹುಡುಕು' ಎಂದಾಗುತ್ತದೆ. 'Research' ಎಂಬ ಪದವು 'Researcher' ಎಂಬ ಫ್ರೆಂಚ್ ಪದದಿಂದ ಬಂದಿದೆ. ಅದರ ಅರ್ಥ ಹಿಂದಿನದನ್ನು 'ಹುಡುಕು' (to search back) ಎಂದರ್ಥ, ಏನನ್ನು ಎಂಬ ಪ್ರಶ್ನೆ ಬರುತ್ತದೆ. ವ್ಯಕ್ತಿ ಯಾವುದಾದರೂ ವಿಷಯಕ್ಕೆ ಸಂಬಂಧಿಸಿದಂತೆ ಸತ್ಯವನ್ನು ಹುಡುಕುತ್ತಾನೋ ಅದನ್ನೇ 'ಸಂಶೋಧನೆ' ಎಂದು ಹೇಳುವುದುಂಟು ಸತ್ಯಶೋಧನೆಯನ್ನು 'ಸಂಶೋಧನೆ' ಎನ್ನುವುದುಂಟು. ಒಂದು ವಸ್ತು ಅಥವಾ ವಿಷಯದ ವಿಮರ್ಶಾತ್ಮಕವಾಗಿ ವಿವರಣೆ ನೀಡುವ ಮತ್ತು ಹೊಸ ಹೊಸ ಸಿದ್ಧಾಂತಗಳನ್ನು ಬೆಳಕಿಗೆ ತರುವಂತ ಪ್ರಕ್ರಿಯೆಯೇ ಸಂಶೋಧನೆ. ಸಂಶೋಧನೆಯು ಜ್ಞಾನ ದಿಗಂತದಾಚೆ ಇರುವ ಸತ್ಯವನ್ನು ಶೋಧಿಸಿ ಆ ಮೂಲಕ ಜ್ಞಾನದ ವ್ಯಾಪ್ತಿಯನ್ನು ವ್ಯಾಪಕಗೊಳಿಸಿ ನಿರಂತರ ಹೊಸ ಜ್ಞಾನಾರ್ಜನೆಗೊಳ್ಳುವಂತೆ ಮಾಡುವುದಾಗಿದೆ. ನಿರ್ದಿಷ್ಟ ವಿಧಾನದ ಮೂಲಕ ವ್ಯವಸ್ಥಿತವಾಗಿ ನಡೆಸುವ 'ಜ್ಞಾನ ಶೋಧನೆ'ಯೇ ಸಂಶೋಧನೆ ಎನ್ನಬಹುದು.

ನೈಸರ್ಗಿಕ ವಿಜ್ಞಾನಗಳಾದ ಭೌತಶಾಸ್ತ್ರ ರಸಾಯನಶಾಸ್ತ್ರ ಖಗೋಳ ಶಾಸ್ತ್ರ ಮುಂತಾದವುಗಳು ಸಂಶೋಧನೆಯ ಕಾರಣದಿಂದಾಗಿ ಬೆಳೆದಿವೆ. ಇಂದಿಗೂ ಅವುಗಳಲ್ಲಿ ಸಂಶೋಧನೆ ನಡೆಯುತ್ತದೆ. ಅಂತೆಯೇ ಸಾಮಾಜಿಕ ಸಂಗತಿಗಳನ್ನು ಸಂಶೋಧನಾತ್ಮಕವಾಗಿ ಅಭ್ಯಸಿಸುವ ಸಾಧ್ಯತೆಗಳಿಂದಾಗಿ ಸಮಾಜ ವಿಜ್ಞಾನಗಳು ಸಹ ಬೆಳೆದಿವೆ. ಸತ್ಯಶೋಧನೆಯೇ

ಸಂಶೋಧನೆಯ ಉದ್ದೇಶವಾದರೂ ವಿಷಯ ಹಾಗೂ ಉದ್ದೇಶಗಳಿಗೆ ಅನುಸರಿಸಿ ಸಂಶೋಧನೆ ಮಾರ್ಗ ಹಾಗೂ ವಿಧಾನಗಳು ಬದಲಾಗುತ್ತವೆ. ಅಂತೆಯೇ ವಿವಿಧ ವಿಜ್ಞಾನಗಳು ವಿವಿಧ ಸಂಶೋಧನಾ ಸಲಕರಣೆಗಳನ್ನು ಹೊಂದಿವೆ. ನೈಸರ್ಗಿಕ ವಿಜ್ಞಾನಗಳಲ್ಲಿ ಪ್ರಯೋಗಾಲಯವೇ ಸಂಶೋಧನೆಯ ಕೇಂದ್ರ. ಆದರೆ ಮಾನವನ ವರ್ತನೆಗಳ ಶೋಧನೆಯು ಪ್ರಯೋಗಾಲಯವೇ ಸಂಶೋಧನೆಯ ಕೇಂದ್ರ ಆದರೆ ಮಾನವನ ವರ್ತನೆಗಳ ಶೋಧನೆಯು ಪ್ರಯೋಗಾಲಯದಲ್ಲಿ ಸಾಧ್ಯವಿಲ್ಲ. ಹಾಗಾಗಿ ವಿಜ್ಞಾನಿಗಳೇ ಸಮಾಜದೊಳಗೆ ಸಂಶೋಧನೆಗಾಗಿ ಪ್ರವೇಶಿಸಬೇಕಾಗುತ್ತದೆ. ಇದನ್ನೇ 'ಕ್ಷೇತ್ರಕಾರ್ಯ' ಎನ್ನುತ್ತೇವೆ. ಸಂಶೋಧನೆಯು ಸಿದ್ಧಾಂತದ ದಾರಿದೀಪದಲ್ಲಿ ಮುಂದುವರೆಯುತ್ತದೆ.

ನಮ್ಮ ತಿಳಿವಳಿಕೆಯು ವಿಸ್ತಾರಗೊಳ್ಳಲು ತುಂಬಾ ಸಹಕಾರಿಯಾದ ಅಧ್ಯಯನ ಕ್ರಮವನ್ನು 'ಸಂಶೋಧನೆ' ಎನ್ನುತ್ತೇವೆ. ಈ ಹೇಳಿಕೆಯು ವಿಜ್ಞಾನ, ಸಾಹಿತ್ಯ, ಕಲೆ, ಮತ್ತಿತರ ಎಲ್ಲಾ ರಂಗಗಳಿಗು ಅನ್ವಯಿಸುತ್ತದೆ. ಹಿಂದಿನ ಪೀಳಿಗೆಯ ಜನರು ತಮ್ಮ ಕಾಲದಲ್ಲಿ ಹಲವು ಕ್ಷೇತ್ರಗಳಲ್ಲಿ ಅನೇಕ ಸಾಧನೆ ಮಾಡಿದ್ದಾರೆ. ಅವರ ಸಾಧನೆಗಳು ನಮ್ಮ ಕಣ್ಣಿಗೆ ಬೀಳದೆ ನಿಗೂಢವಾಗಿರುವುದುಂಟು. ಇಂತಹವುಗಳನ್ನು ಹುಡುಕಿ ತೆಗೆದು, ಅವುಗಳನ್ನು ಎಚ್ಚರಿಕೆಯಿಂದ ಅಧ್ಯಯನ ಮಾಡಿ ಅವುಗಳ ಬಗ್ಗೆ ತಿಳುವಳಿಕೆ ಪಡೆಯುವುದೇ ಸಂಶೋಧನೆಯ ಪ್ರಧಾನ ಉದ್ದೇಶ. ಸಂಶೋಧನೆಯಲ್ಲಿ Orientialist, odernist ದೃಷ್ಟಿಕೋನಗಳಿವೆ. ಪ್ರಾಚೀನ ಸಂಶೋಧನೆ ನಮ್ಮ ತಾಂತ್ರಿಕ ಅಧ್ಯಯನಕ್ಕೆ ಸಹಾಯವಾದರೆ, ಸಮಕಾಲೀನ ಸಾಹಿತ್ಯ, ಸಂಸ್ಕೃತಿ ಕುರಿತ ಸಂಶೋಧನೆ ಆಧುನಿಕತೆಗೆ ಸೇರುತ್ತದೆ. ಇದೂ ಸಹ ಸಂಶೋಧನೆಯೆ, ಸಂಶೋಧನೆ ವಿಜ್ಞಾನ ಅಧ್ಯಯನ ಕ್ರಮದಲ್ಲಿ ತಿಳುವಳಿಕೆ ಹೆಚ್ಚಿಸುವ ಒಂದು ಪ್ರಮುಖ ಭಾಗವಾಗಿದೆ.

'ಸಂಶೋಧನೆ' ಎಂಬುದು "ಯಾವುದೇ ವಸ್ತು ಅಥವಾ ವಿಷಯದ ಬಗ್ಗೆ ವಿಮರ್ಶಾತ್ಮಕವಾಗಿ ಹಾಗೂ ವಿಚಾರಣೆ ಮಾಡುವ ಮತ್ತು ಈ ಸಂಬಂಧವಾಗಿ ಹೊಸ ಹೊಸ ಸಿದ್ಧಾಂತಗಳನ್ನು ಬೆಳಕಿಗೆ ತರುವಂತಹ ಪ್ರಕ್ರಿಯೆಯಾಗಿದೆ" ಸಾಮಾನ್ಯ ತತ್ವಗಳನ್ನು ರೂಪಿಸುವ ಉದ್ದೇಶಕ್ಕಾಗಿ ಒಂದು ಸಮಸ್ಯೆಯನ್ನು ಅಧ್ಯಯನ ಮಾಡಲು ಬಳಸುವ ವ್ಯವಸ್ಥಿತವಾದ ಹಾಗೂ ವಸ್ತುನಿಷ್ಠವಾದ ಪ್ರಯತ್ನವೇ 'ಸಂಶೋಧನೆ' ಎನ್ನಬಹುದು.

೧. ವೆಬ್‌ಸ್ಟರ್ಸ್ ಇಂಟರ್‌ನ್ಯಾಶನಲ್ ನಿಘಂಟಿನ ಪ್ರಕಾರ "ಸಂಶೋಧನೆಯು ನಿಜಾಂಶಗಳು ಅಥವಾ ತತ್ವಗಳನ್ನು ಪಡೆಯಲು ನಡೆಸಲಾಗುವ ಜಾಗ್ರತ ವಿಮರ್ಶಾತ್ಮಕ ಪರೀಕ್ಷೆ ಅಥವಾ ವಿಚಾರಣೆ, ಏನನ್ನಾದರೂ ನಿಶ್ಚಯಿಸುವಲ್ಲಿನ ಶ್ರದ್ಧಾಪೂರಕ ತನಿಖೆ".

೨. ಎನ್‌ಸೈಕ್ಲೋಪಿಡಯ ಆಫ್ ಸೋಷಿಯಲ್ ಸೈನ್ಸ್ ಪ್ರಕಾರ ಸಂಶೋಧನೆಯು "ಒಪ್ಪಿತ ನಿರ್ಣಯಗಳನ್ನು ಹೊಸ ಸತ್ಯಾಂಶಗಳ ಆಧಾರದ ಮೇಲೆ ವಿಮರ್ಶಾತ್ಮಕವಾಗಿ ಪರೀಕ್ಷಿಸಿ ಪರಿಷ್ಕರಿಸುವುದು".

೩. ರೆಡ್‌ಮನ್ ಮತ್ತು ಮೊರೆ ಪ್ರಕಾರ "ಹೊಸ ಜ್ಞಾನವನ್ನು ಪಡೆಯುವ ವ್ಯವಸ್ಥಿತ ಪ್ರಯತ್ನವೇ ಸಂಶೋಧನೆ".

**ಆರ್ಥಿಕ ಸಂಶೋಧನೆ ಎಂದರೇನು?**

೧. ನ್ಯೂ ಸೆಂಚುರಿ ನಿಘಂಟಿನ ಪ್ರಕಾರ "ಸಂಗತಿಗಳನ್ನು ಮತ್ತು ತತ್ವಗಳನ್ನು ರೂಪಿಸಲು ಎಚ್ಚರಿಕೆಯಿಂದ ಕೂಡಿದ ವಿಚಾರಣೆ ಅಥವಾ ಹುಡುಕಾಟವನ್ನು ಸಂಶೋಧನೆ ಎಂದು ಕರೆಯುತ್ತೇವೆ.

೨. ಆರ್ಥಿಕ ವಿಜ್ಞಾನಿಗಳ ವಿಶ್ವಕೋಶದ ಪ್ರಕಾರ "ಸಮ್ಮತ ಅಭಿಪ್ರಾಯಗಳನ್ನು ಸಂಶೋಧಿತ ಹೊಸ ಸಂಗತಿಗಳೊಂದಿಗೆ ವಿಮರ್ಶಾತ್ಮಕವಾಗಿ ಪರೀಕ್ಷೆ ಮಾಡಿ ನೋಡುವುದೇ ಸಂಶೋಧನೆ".

೩. ಪೌಲಿನ್ ವಿ.ಯಂಗ್‌ರ ಪ್ರಕಾರ "ಜ್ಞಾನಾಭಿವೃದ್ಧಿಯ ಅಥವಾ ಯೋಗ್ಯ ಮಾಹಿತಿಗಳ ಸಂಗ್ರಹಕ್ಕಾಗಿ ಸಾಮಾಜಿಕ ಜೀವನವನ್ನು ಅಧ್ಯಯನ ಮಾಡುವ, ವಿಶ್ಲೇಷಿಸುವ ಕ್ರಮವೇ ಆರ್ಥಿಕ ಸಂಶೋಧನೆ", ಮತ್ತೆ ಮುಂದುವರಿದು ಹೀಗೆನ್ನುತ್ತಾರೆ. "ಆರ್ಥಿಕ ಸಂಶೋಧನೆಯನ್ನು ಹೊಸ ಅಂಶಗಳನ್ನು ಕಂಡು ಹಿಡಿಯುವ ಹಳೆಯ ಅಂಶಗಳನ್ನು ಪುನರ್ ನಿರ್ಮಿಸುವ, ಪರಸ್ಪರ ಸಂಬಂಧ ಕಲ್ಪಿಸುವ ಕಾರ್ಯ ಕಾರಣ ಸಂಬಂಧಗಳನ್ನು ವಿವರಿಸುವ ಮತ್ತು ಅವುಗಳನ್ನು ಸ್ವಾಭಾವಿಕವಾಗಿ ನಿಯಂತ್ರಿಸುವ ನಿಯಮಗಳನ್ನು ವೈಜ್ಞಾನಿಕ ವಿಧಾನದಲ್ಲಿ ಕಂಡು ಹಿಡಿಯುವ ರೀತಿಯೇ ಆಗಿದೆ".

**೩.೨. ಸಂಶೋಧನೆಯ ಹಂತಗಳು**

೧. ಸಂಶೋಧನೆಯ ಸಮಸ್ಯೆ

೨. ಲಭ್ಯವಿರುವ ಸಾಹಿತ್ಯ ಸಮೀಕ್ಷೆ

೩. ಪ್ರಾಕಲ್ಪನೆಯ ರಚನೆ

೪. ಸಂಶೋಧನಾ ವಿನ್ಯಾಸದ ತಯಾರಿಕೆ

೫. ಮಾದರಿ ವಿನ್ಯಾಸ ನಿರ್ಧರಿಸುವಿಕೆ

೬. ಮಾಹಿತಿ ಸಂಗ್ರಹಣೆ

೭. ಮಾಹಿತಿ ವಿಶ್ಲೇಷಣೆ

೮. ಪ್ರಾಕಲ್ಪನೆಯ ಪರೀಕ್ಷೆ

೯. ವರದಿಯ ತಯಾರಿಕೆ

## ೨.೪. ಅಧ್ಯಯನದ ಪ್ರದೇಶ ಪರಿಚಯ

ಉಡುಗಳ ಅಂದರೆ ನಕ್ಷತ್ರಗಳ ಪತಿಯಾದ (ಪತಿಯರು) ಚಂದ್ರ (ಉಡುಪ) ಒಮ್ಮೆ ದಕ್ಷ ಪ್ರಜಾಪತಿಯ ಶಾಪಕ್ಕೆ ಗುರಿಯಾಗಿ, ಅದರಿಂದ ವಿಮೋಚನೆ ಹೊಂದುವ ಉದ್ದೇಶದಿಂದ ಪರಮೇಶ್ವರನ್ನು ಕುರಿತು ಇಲ್ಲಿನ ಅಭಯಾರಣ್ಯದಲ್ಲಿ ಕುಳಿತು ತಪಸ್ಸು ಮಾಡಿ ಸಫಲ ಮನೋರಥ ಸಾಧನಂತೆ ಅವನಿಂದಾಗಿ ಈ ಕ್ಷೇತ್ರಕ್ಕೆ ಉಡುಪಿ ಎಂದು ಹೆಸರು ಬಂತಂತೆ !ದ್ವೈತಮತ ಪ್ರತಿಷ್ಠಾಪನಾಚಾರ್ಯರಾದ ಶ್ರೀ ಮಧ್ವಾಚಾರ್ಯರು ಇಲ್ಲಿ ಪ್ರತಿಷ್ಠಾಪಿಸಿದ ಶ್ರೀ ಕೃಷ್ಣನಿಂದ ಉಡುಪಿ ಹೆಚ್ಚು ಪ್ರಸಿದ್ದವಾಯಿತು. ಶ್ರೀ ಕೃಷ್ಣ ಇಲ್ಲಿ ಕಿಂಡಿಯ ಮೂಲಕ ಕನಕದಾಸರಿಗೆ ದರುಶನವಿತ್ತ ಸ್ಥಳದಲ್ಲಿ ಈಗಲೂ ಕನಕನ ಕಿಂಡಿ ಇದೆ.

ಮೂಲತಃ ಉಡುಪಿಯು ದಕ್ಷಿಣ ಕನ್ನಡ ಜಿಲ್ಲೆಯ ಅವಿಭಾಜ್ಯ ಅಂಗವಾಗಿದ್ದ ಉತ್ತರದ ಮೂರು ತಾಲ್ಲೂಕುಗಳು ಸೇರಿ ೧೯೯೭ ಆಗಸ್ಟ್ ೧೫ ರಂದು ಉದ್ಘಾಟನೆಯಾಗಿ ಪ್ರತ್ಯೇಕ ಜಿಲ್ಲೆಯಾಗಿ ರೂಪುಗೊಂಡಿತು. ಜಿಲ್ಲೆಯ ಒಟ್ಟು ಭೌಗೋಳಿಕ ವಿಸ್ತೀರ್ಣ ೩೫೯೮ ಚ.ಕಿ.ಮೀ. (ರಾಜ್ಯದ ೨೬ನೇ ದೊಡ್ಡ ಜಿಲ್ಲೆ) ಆಡಳಿತದ ದೃಷ್ಟಿಯಿಂದ ಜಿಲ್ಲೆಯನ್ನು ಉಡುಪಿ, ಕುಂದಾಪುರ ಮತ್ತು ಕಾರ್ಕಳವೆಂಬ ಮೂರು ತಾಲ್ಲೂಕುಗಳಾಗಿ ವಿಂಗಡಿಸಲಾಗಿದೆ. ಕರಾವಳಿಯ ಸುಂದರ ಪರಿಸರದಲ್ಲಿ ಜಿಲ್ಲೆಯಾಗಿ ರೂಪುಗೊಂಡ ಉಡುಪಿಯು ಶ್ರೀ ಕೃಷ್ಣನ ನಾಡಾಗಿದ್ದು ಹೋಟೆಲ್ ಉದ್ಯಮ ಶಿಕ್ಷಣ ಕ್ಷೇತ್ರದಲ್ಲಿನ ಸಾಧನೆಗಳಿಂದಾಗಿ ಅಂತರರಾಷ್ಟ್ರೀಯ ಖ್ಯಾತಿಯನ್ನು ಹೊಂದಿದೆ. ೨೦೦೧ರ ಜನಗಣತಿಯ ಪ್ರಕಾರ ಜಿಲ್ಲೆಯ ಒಟ್ಟು ಜನಸಂಖ್ಯೆ ೧೧.೧೨.೨೪೩ ಜಿಲ್ಲೆಯ ಶೇ. ೮೧.೪೫ರಷ್ಟು ಗ್ರಾಮೀಣ ಜನಸಂಖ್ಯೆಯನ್ನು ಹೊಂದಿದೆ. ಕೃಷಿ, ಮೀನುಗಾರಿಕೆ, ತೆಂಗು ಬೆಳೆ ಇತ್ಯಾದಿ ಜಿಲ್ಲೆಯ ಜನರ ಪ್ರಮುಖ ಉದ್ಯೋಗವಾಗಿದೆ. ಜಿಲ್ಲೆಯ ಪ್ರಮುಖ ಭಾಷೆಗಳು ತುಳು, ಕನ್ನಡ ಮತ್ತು ಕೊಂಕಣಿ, ಜಿಲ್ಲೆಯ ಒಟ್ಟು ಸಾಕ್ಷರತೆ ಪ್ರಮಾಣ ೯೨% ಕರ್ನಾಟಕದಲ್ಲೇ ಅತೀ ಹೆಚ್ಚು ಸಾಕ್ಷರತೆಯನ್ನು ಹೊಂದಿದ ಕೀರ್ತಿ ಜಿಲ್ಲೆಗೆ ಸಲ್ಲುತ್ತದೆ. ಅಲ್ಲದೆ ರಾಜ್ಯದ ಮಾನವ ಅಭಿವೃದ್ಧಿ ಸೂಚಿಯಲ್ಲಿ ಮೂರನೇ ಸ್ಥಾನವನ್ನು ಹೊಂದಿರುವ ಜಿಲ್ಲೆಯು ಅಭಿವೃದ್ಧಿ ಹೊಂದಿದ ಜಿಲ್ಲೆಗಳಲ್ಲಿ ಒಂದಾಗಿದೆ.

**ಉಡುಪಿ**

ಉಡುಪಿ ತಾಲ್ಲೂಕು ಜಿಲ್ಲೆಯ ಪ್ರಮುಖ ಪ್ರದೇಶವಾಗಿದೆ. ಜಿಲ್ಲೆಯ ಕೇಂದ್ರ ಸ್ಥಳವಾದ ಉಡುಪಿ ತಾಲ್ಲೂಕು ಸುಮಾರು ೫೦,೦೦೦ ಜನಸಂಖ್ಯೆಯನ್ನು ಹೊಂದಿದೆ.

**ಕಾರ್ಕಳ**

೨೬.೦೬ ಚ.ಕೀ. ಭೌಗೋಳಿಕ ಪ್ರಧೇಶವನ್ನು ಹೊಂದಿರುವ ಕಾರ್ಕಳ ತಾಲ್ಲೂಕು ಜಿಲ್ಲೆಯ ಮುಖ್ಯ ಪಟ್ಟಣವಾಗಿದೆ. ೨೦೦೧ರ ಜನಗಣತಿಯ ಪ್ರಕಾರ ೨೫.೧೧೮ ಜನಸಂಖ್ಯೆಯನ್ನು ಹೊಂದಿದೆ. ಶೇ. ೫೧ ರಷ್ಟು ಪುರುಷ ಜನಸಂಖ್ಯೆಯನ್ನು ಮತ್ತು ಶೇ. ೪೯ರಷ್ಟು ಮಹಿಳಾ ಜನಸಂಖ್ಯೆಯನ್ನು ಹೊಂದಿದೆ. ಸಾಕ್ಷರತೆ ಪ್ರಮಾಣ ಶೇ. ೮೨% ಆಗಿದ್ದು, ಮಹಿಳಾ ಸಾಕ್ಷರತೆ ಶೇ. ೭೯% ಮತ್ತು ಪುರಷರ ಸಾಕ್ಷರತೆ ಶೇ. ೮೫% ಆಗಿದೆ.

**ಕುಂದಾಪುರ**

ಕುಂದಾಪುರಕ್ಕೆ ಕುಂದವರ್ಮ ಎಂಬ ಅರಸ ಪಂಚಗಂಗಾವಳಿಯ ಹತ್ತಿರ ಕಟ್ಟಿಸಿದ ಕುಂದೇಶ್ವರ ದೇವಾಲಯ ಕಾರಣವಂತೆ. ಜಿಲ್ಲೆಯ ಉತ್ತರ ಭಾಗದಲ್ಲಿರುವ ಇನ್ನೊಂದು ತಾಲ್ಲೂಕು ಕುಂದಾಪುರ. ೨೦೦೧ ಜನಗಣತಿಯ ಪ್ರಕಾರ ತಾಲ್ಲೂಕಿನ ಒಟ್ಟು ಜನಸಂಖ್ಯೆ ೨೮.೫೯೫, ಶೇ. ೯೫% ರಷ್ಟು ಪುರುಷ ಜನಸಂಖ್ಯೆಯನ್ನು ಮತ್ತು ಶೇ. ೫೧ ರಷ್ಟು ಮಹಿಳಾ ಜನಸಂಖ್ಯೆಯನ್ನು ಹೊಂದಿದೆ. ಸಾಕ್ಷರತೆ ಪ್ರಮಾಣ ಶೇ. ೯೨ ಆಗಿದ್ದು ಮಹಿಳಾ ಸಾಕ್ಷರತೆ ಶೇ.೮೮% ಮತ್ತು ಪುರುಷರ ಸಾಕ್ಷರತೆ ಶೇ.೯೪% ಆಗಿದೆ.

**೨.೫. ಸಂಶೋಧನಾ ವಿಷಯ**

ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯ ಆರ್ಥಿಕ ಮತ್ತು ಆರ್ಥಿಕೇತರ ಪರಿಣಾಮಗಳು ಒಂದು ಪ್ರಕರಣ ಅಧ್ಯಯನ.

**೨.೬. ಸಂಶೋಧನಾ ವಿಷಯದ ಸಮಸ್ಯೆ**

ಗ್ರಾಮಾಂತರ ಪ್ರದೇಶಗಳಲ್ಲಿ ಕೃಷಿಯೇ ಮುಖ್ಯ ಕಸುಬು ಕರಕುಶಲ ವೃತ್ತಿಗಳಾಗಲಿ, ಗುಡಿ ಕೈಗಾರಿಕೆಗಳಾಗಲಿ ಗ್ರಾಮೀಣ ಕೈಗಾರಿಕೆಗಳಾಗಲಿ ಅಥವಾ ಚಿಕ್ಕ ಕೈಗಾರಿಕೆಗಳಾಗಲಿ ಬೆಳೆದು ಬಂದಿಲ್ಲ. ಹೀಗಾಗಿ ಗ್ರಾಮೀಣ ಪ್ರದೇಶದ ರೈತರು, ಕಾರ್ಮಿಕರು ಆರ್ಥಿಕವಾಗಿ ಸಬಲರಾಗಿಲ್ಲ. ಹೀಗಾಗಿ ಎಲ್ಲಾ ಕಾರ್ಮಿಕರು ರೈತರು ಮತ್ತು ರೈತ ಕಾರ್ಮಿಕರು ತಮ್ಮ ಉಪ ಜೀವನಕ್ಕಾಗಿ ಸಾಗುವಳಿ ಭೂಮಿಯನ್ನೇ ಅವಲಂಬಿಸಬೇಕಾಗುತ್ತದೆ. ಹೀಗೆ ಗ್ರಾಮೀಣ ಪ್ರದೇಶಗಳಲ್ಲಿನ ಜನರು ತಮ್ಮ ಉಪಜೀವನಕ್ಕಾಗಿ ಕೃಷಿ ಹಾಗೂ ತತ್ಸಂಬಂಧಿ ಚಟುವಟಿಕೆಯಲ್ಲಿಯೇ ತೊಡಗಬೇಕಾಗುತ್ತದೆ. ಕೃಷಿ ಹಾಗೂ ತತ್ಸಂಬಂಧ

ಚಟುವಟಿಕೆಗಳಲ್ಲಿ ನಿರತರಾದ ಹೆಚ್ಚಿನ ಜನರು ನಿಜವಾಗಿಯೂ ನಿರುದ್ಯೋಗಿಗಳಿದ್ದಂತೆಯೇ ಏಕೆಂದರೆ ಈ ಹೆಚ್ಚಿನ ಜನರಿಂದ ಕೃಷಿಯ ಉತ್ಪಾದನೆಯೇನೂ ಹೆಚ್ಚಾಗಿರುವುದಿಲ್ಲ. ಅವರಿಗೆ ಬೇರೆ ಬೇರೆ ವೃತ್ತಿಗಳನ್ನು ಕಲ್ಪಿಸಿಕೊಟ್ಟು ನಿರುದ್ಯೋಗವನ್ನು ನಿವಾರಣೆ ಮಾಡಬೇಕಾಗುತ್ತದೆ. ಹೀಗಾಗಿ ನಿರುದ್ಯೋಗವನ್ನು ನಿವಾರಣೆ ಮಾಡುವ ಸಲುವಾಗಿ ಭಾರತ ಸರ್ಕಾರವು ಹಲವು ಗ್ರಾಮೀಣ ಅಭಿವೃದ್ಧಿ ಕಾರ್ಯಕ್ರಮಗಳನ್ನು ಜಾರಿಗೆ ತಂದಿದೆ. ಅದರಲ್ಲಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯು ಒಂದು. ಪ್ರಸ್ತುತ ಅಧ್ಯಯನದಲ್ಲಿ ಈ ಯೋಜನೆಯು ಯಶಸ್ವಿಯಾಗಿ ಅನುಷ್ಠಾನವಾಗಿದೆಯೇ? ಪರಿಣಾಮಕಾರಿಯಾಗಿ ಅನುಷ್ಠಾನಕ್ಕೆ ಬಂದಿದೆಯೇ? ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯ ರಚನೆ ಜನತೆಯಲ್ಲಿ ಉಂಟಾದ ಆರ್ಥಿಕ ಮತ್ತು ಆರ್ಥಿಕೇತರ ಪರಿಣಾಮಗಳು ಯಾವುವು? ಇದು ಬಡ ಗ್ರಾಮೀಣ ಜನತೆಗೆ ಎಷ್ಟರಮಟ್ಟಿಗೆ ಪ್ರಯೋಜನಕಾರಿಯಾಗಿದೆ ಇದರಿಂದ ಅವರ ಜೀವನ ಮಟ್ಟವು ಬದಲಾವಣೆಯಾಗಿದೆಯೇ? ಅವರು ಸ್ವಾವಲಂಬಿ ಜೀವನವನ್ನು ನಡೆಸಲು ಸಮರ್ಥರಿದ್ದಾರೆಯೇ? ಈ ಎಲ್ಲಾ ಪ್ರಶ್ನೆಗಳು ನಮ್ಮನ್ನು ಕಾಡುತ್ತಿವೆ.

**೨.೭. ಸಂಶೋಧನೆಯ ಉದ್ದೇಶಗಳು**

**ಸಂಶೋಧನಾ ವಿಷಯದ ಪ್ರಮುಖ ಉದ್ದೇಶಗಳು ಈ ಕೆಳಕಂಡಂತಿವೆ.**

೧. ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯ ಅನುಷ್ಠಾನದಿಂದ ಗ್ರಾಮೀಣ ಜನರು ಆರ್ಥಿಕತೆಯಲ್ಲಿ ಯಾವ ರೀತಿ ಪರಿಣಾಮವನ್ನುಂಟು ಮಾಡಿದೆ ಎಂಬುದನ್ನು ಅಧ್ಯಯನ ನಡೆಸುವುದು. ಉದಾಃ ಆದಾಯ, ಜೀವನ ಮಟ್ಟ.

೨. ಶಿಕ್ಷಣ, ಆರೋಗ್ಯ, ಸಾಮಾಜಿಕ ಸ್ಥಾನಮಾನ, ರಾಜಕೀಯ ಸ್ಥಾನಮಾನ ಮುಂತಾದ ಆರ್ಥಿಕೇತರ ಕ್ಷೇತ್ರಗಳಲ್ಲಿ ಯೋಜನೆಯ ಪರಿಣಾಮಗಳನ್ನು ಅಧ್ಯಯನ ಮಾಡುವುದು.

೩. ಗ್ರಾಮೀಣ ಅಭಿವೃದ್ಧಿಯಲ್ಲಿ ಈ ಯೋಜನೆಯ ಕೊಡುಗೆಗಳನ್ನು ತಿಳಿಯುವುದು.

೪. ಸಬಲೀಕರಣದಲ್ಲಿ ಈ ಯೋಜನೆಯ ಪ್ರಭಾವವನ್ನು ಸ್ಥಳೀಯ ಚೌಕಟ್ಟಿನಲ್ಲಿ ಅಧ್ಯಯನ ಮಾಡುವುದು.

೫. ಈ ಯೋಜನೆಯು ಗ್ರಾಮೀಣ ಕುಟುಂಬಗಳ ಸರ್ವತೋಮುಖ ಬೆಳವಣಿಗೆಗೆ ಹೇಗೆ ಸಹಾಯಕವಾಗಿದೆ ಎಂಬುದನ್ನು ಅರಿಯಲು.

## ೨.೮. ಸಂಶೋಧನಾ ವಿಷಯದ ವ್ಯಾಪ್ತಿ

ರಾಷ್ಟ್ರಿಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೇಯ ಆರ್ಥಿಕ ಮತ್ತು ಆರ್ಥಿಕೇತರ ಪರಿಣಾಮಗಳು ಒಂದು ಪ್ರಕರಣ ಅಧ್ಯಯನವು ಈ ಕೆಳಕಂಡಂತೆ ತನ್ನ ಅಧ್ಯಯನದ ವ್ಯಾಪ್ತಿಯನ್ನು ಹೊಂದಿದೆ.

ಕರ್ನಾಟಕ ರಾಜ್ಯದ ಉಡುಪಿ ಜಿಲ್ಲೆಯ ಕಾರ್ಕಳ ತಾಲ್ಲೂಕಿನ ಹೆಬ್ರಿ ಎಂಬ ಗ್ರಾಮ ಪಂಚಾಯತಿಯನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಇಡೀ ಜಿಲ್ಲೆಯನ್ನು ಅಧ್ಯಯನಕ್ಕೆ ಒಳಪಡಿಸಲು ಸಾಧ್ಯವಾಗುತ್ತಿಲ್ಲ. ಸಮಯದ ಅಭಾವದಿಂದ ಕಾರ್ಕಳ ತಾಲ್ಲೂಕಿನ ಹೆಬ್ರಿ ಗ್ರಾಮ ಪಂಚಾಯಿತಿಯನ್ನು ಮಾತ್ರ ಆಯ್ಕೆ ಮಾಡಿಕೊಳ್ಳಲಾಗಿದೆ. ಈ ಯೋಜನೆಯ ಅನುಷ್ಠಾನದ ಜವಾಬ್ದಾರಿ ಹೆಚ್ಚಿನ ಮಟ್ಟದಲ್ಲಿ ಗ್ರಾಮ ಪಂಚಯಿತಿಗೆ ಸಂಬಂಧ ಪಟ್ಟಿರುವುದಾಗಿರುದರಿಂದ ಗ್ರಾಮಪಂಚಯಿತಿಯನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ.

## ೨.೯. ಸಂಶೋಧನೆಯ ಮಿತಿಗಳು

- ಮಾಹಿತಿಯ ಸಂಗ್ರಹಣೆಗೆ ಕೇವಲ ೩ ತಿಂಗಳು ಮಾತ್ರ.
- ಈ ಪ್ರಕರಣದ ಅಧ್ಯಯನಕ್ಕೆ ವಿಶಾಲವಾಗಿ ತಿಳಿಯಲು ಹೆಚ್ಚಿನ ಸಮಯ ಬೇಕಾಗಿದೆ.
- ಮಾಹಿತಿಯ ಸಂಗ್ರಹಣೆಗೆ ಕೇವಲ ಒಂದು ಗ್ರಾಮ ಪಂಚಾಯಿತಿಯನ್ನು ಮಾತ್ರ ಆಯ್ಕೆ ಮಾಡಿಕೊಳ್ಳಲಾಗಿದೆ.
- ಈ ಪ್ರಕರಣದ ಅಧ್ಯಯನದ ಸಂಬಂಧ ಪ್ರಮುಖವಾಗಿ ಉಡುಪಿ ಜಿಲ್ಲೆಗೆ ಮತ್ತು ಹೆಬ್ರಿ ಗ್ರಾಮಪಂಚಯಿತಿಗೆ ಸಂಬಂಧಿಸಿದೆ.
- ಕಾರ್ಯದರ್ಶಿಗಳ, ಅಧ್ಯಕ್ಷರ ಹಾಗೂ ಪಂಚಯಿತಿಯ ಇತರ ನೌಕರರ ಅಧಿಕ ಕಾರ್ಯಭಾರದ ಒತ್ತಡದಿಂದ ಅಲ್ಪಕಾಲ ಮಾತ್ರ ಸಂಪರ್ಕಕ್ಕೆ ಸಿಕ್ಕಿದ್ದರು.

**೨.೧೦ ಸಂಶೋಧನಾ ವಿಧಾನಗಳು**

ಇದೊಂದು ಸಂಶೋಧನಾ ವಿಷಯದ ವ್ಯವಸ್ಥಿತ ವಿಧಾನವಾಗಿದೆ. ಈ ವಿಷಯದ ಅಧ್ಯಯನವನ್ನು ಈ ಕೆಳಕಂಡ ವಿಧಾನಗಳ ಮೂಲಕ ಕೈಗೊಂಡುದುದಾಗಿದೆ.

೧. ವಿಷಯದ ಆಯ್ಕೆ ಕರ್ನಾಟಕ ರಾಜ್ಯದ ಉಡುಪಿ ಜಿಲ್ಲೆಯ ಕಾರ್ಕಳ ತಾಲ್ಲೂಕಿನ ಹೆಬ್ರಿ ಎಂಬ ಗ್ರಾಮ ಪಂಚಾಯಿತಿಯನ್ನು ಆಯ್ಕೆ ಮಾಡಿಕೊಳ್ಳಲಾಗಿದೆ.

೨. ಮಾಹಿತಿ ಸಂಗ್ರಹಣೆ

ಅ. ಪ್ರಾಥಮಿಕ ಮೂಲ

ಬ. ಕೇವಲ ಕೆಲವೇ ವ್ಯಕ್ತಿಗಳಿಗೆ (ನೌಕರರಿಗೆ) ಪ್ರಶ್ನೆಗಳನ್ನು ಹಾಕುವುದರ ಮೂಲಕ ಮಾಹಿತಿಯನ್ನು ಸಂಗ್ರಹಿಸಲಾಗಿದೆ.

ಕ. ಸಂದರ್ಶನದ ಮುಖಾಂತರ ಮಾಹಿತಿಯನ್ನು ಸಂಗ್ರಹಿಸಲಾಗಿದೆ.

ಡ. ಮಾಧ್ಯಮಿಕ ಮೂಲ

ದಾಖಲೆ, ಪತ್ರ, ಪ್ರಬಂಧ, ದಿನಚರಿಯ, ಸಮೀಕ್ಷೆ ವರದಿಗಳು, ಸಚಿವಾಲಯ ಮತ್ತು ಇಲಾಖೆಯ ಪ್ರಕಟಣೆ, ಮಸ್ತಕ, ಮಾಸ ಪತ್ರಿಕೆಗಳಲ್ಲಿ ಸಂಗ್ರಹಿಸಲಾಗಿದೆ.

**೨.೧೧. ಅಧ್ಯಾಯಗಳ ಪರಿಚಯ**

ಮೊದಲನೆಯ ಅಧ್ಯಾಯದಲ್ಲಿ ಅಧ್ಯಯನದ ಉದ್ದೇಶ ವ್ಯಾಪ್ತಿ, ಮಹತ್ವ ಅಧ್ಯಯನ ಪ್ರದೇಶದ ಪರಿಚಯವನ್ನು ನೀಡಲಾಗಿದೆ. ಯಾವ ಉದ್ದೇಶವನ್ನಿಟ್ಟುಕೊಂಡು ಈ ಯೋಜನೆಯು ಪ್ರಾರಂಭವಾಗಿದೆ. ಅಧ್ಯಯನ ಏಕೆ ಮಹತ್ವಮೂರ್ಣವಾಗಿದೆ. ವ್ಯಾಪ್ತಿಯಲ್ಲಿ ಯಾವೆಲ್ಲಾ ಪರಿಲ್ಪನೆಗಳನ್ನು ವಿಷಯಗಳನ್ನು ಬಳಸಿಕೊಳ್ಳಲಾಗಿದೆ ಎಂದು ವಿವರಿಸಲಾಗಿದೆ.

ಎರಡನೆಯ ಅಧ್ಯಾಯದಲ್ಲಿ ಸಂಶೋಧನೆ ಎಂದರೇನು, ಅರ್ಥ, ಸಂಶೋಧನೆಯ ಹಂತಗಳು ಅಧ್ಯಯನದ ಹಾದಿ, ಸಂಶೋಧನೆಯ ಸಮಸ್ಯೆ ಸಂಶೋಧನೆಯ ಉದ್ದೇಶ, ವ್ಯಾಪ್ತಿ, ಮಿತಿಗಳು, ಸಂಶೋಧನಾ ವಿಧಾನಗಳನ್ನು ಅಧ್ಯಯನ ಮಾಡಲಾಗಿದೆ.

ಮೂರನೇ ಅಧ್ಯಾಯದಲ್ಲಿ ಅಧ್ಯಯನದ ಪ್ರಮುಖ ವಿಷಯವಾಗಿರುವ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿಯೋಜನೆ, ಗ್ರಾಮೀಣ ಅಭಿವೃದ್ಧಿಯ ಮಹತ್ವ, ಗ್ರಾಮೀಣ ಬಡತನ, ಗ್ರಾಮೀಣ

ಅಭಿವೃದ್ಧಿ ಕಾರ್ಯಕ್ರಮಗಳು, ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯ ಆರ್ಥಿಕ ಮತ್ತು ಆರ್ಥಿಕೇತರ ಪರಿಣಾಮಗಳು ಮುಂತಾದ ವಿಷಯಗಳ ಬಗ್ಗೆ ವಿವರಿಸಲಾಗಿದೆ.

ನಾಲ್ಕನೇ ಅಧ್ಯಾಯದಲ್ಲಿ ಉಡುಪಿ ಜಿಲ್ಲೆಯ ಪರಿಚಯ, ಹೆಬ್ರಿ ಪಂಚಾಯತ್ ಪರಿಚಯ, ಪಂಚಾಯತ್ ರಾಜ್ ಮಟ್ಟದಲ್ಲಿ ಯೋಜನೆಯ ಅನುಷ್ಠಾನ ವಿವಿಧ ಜಿಲ್ಲೆಗಳ ಅಂಕಿ ಅಂಶಗಳು, ರಾಜ್ಯಗಳಲ್ಲಿ ಜಾರಿಯಲ್ಲಿರುವ ಕೂಲಿದರ, ಹೆಬ್ರಿ ಪಂಚಾಯತ್‌ನ ವಾರ್ಷಿಕ ವರದಿಯನ್ನು ನೋಡಬಹುದು.

ಐದನೇ ಅಧ್ಯಾಯದಲ್ಲಿ ರಾಷ್ಟ್ರೀಯ ಉದ್ಯೋಗ ಖಾತ್ರಿ ಯೋಜನೆಯ ಆರ್ಥಿಕ ಮತ್ತು ಆರ್ಥಿಕೇತರ ಪರಿಣಾಮಗಳನ್ನು ನೋಡಬಹುದು.

ಆರನೇ ಅಧ್ಯಾಯದಲ್ಲಿ ಇಡೀ ಅಧ್ಯಯನದ ಸಾರ, ಶೋಧ, ಕೊನೆಯ ಮಾತು ಮತ್ತು ಉದ್ಯೋಗ ಖಾತರಿ ಯೋಜನೆಯ ಸಮರ್ಪಕ ಅನುಷ್ಠಾನಕ್ಕೆ ಬೇಕಾದ ಸಲಹೆ ಸೂಚನೆಯನ್ನು ನೀಡಲಾಗಿದೆ.

# ಅಧ್ಯಾಯ – ೩

## ಗ್ರಾಮೀಣ ಉದ್ಯೋಗದ ನಿರೂಪಣೆ, ಗ್ರಾಮೀಣಾಭಿವೃದ್ಧಿಯ ಮಹತ್ವ ಮತ್ತು ಗ್ರಾಮೀಣ ಅಭಿವೃದ್ಧಿ ಕಾರ್ಯಕ್ರಮಗಳು, ಗ್ರಾಮೀಣ ಉದ್ಯೋಗ ಖಾತರಿ ಕಾಯ್ದೆಯ ವಿಕಸನ – ೨೦೦೫

# ಅಧ್ಯಾಯ – ೩

# ಗ್ರಾಮೀಣ ಉದ್ಯೋಗದ ನಿರೂಪಣೆ, ಗ್ರಾಮೀಣಾಭಿವೃದ್ಧಿಯ ಮಹತ್ವ ಮತ್ತು ಗ್ರಾಮೀಣ ಅಭಿವೃದ್ಧಿ ಕಾರ್ಯಕ್ರಮಗಳು, ಗ್ರಾಮೀಣ ಉದ್ಯೋಗ ಖಾತರಿ ಕಾಯ್ದೆಯ ವಿಕಸನ – ೨೦೦೫

## ೩.೧ ಪ್ರವೇಶ

ಅಭಿವೃದ್ಧಿ ಒಂದು ಬಹು ಆಯಾಮಗಳ ಪ್ರಕ್ರಿಯೆಯಾಗಿದ್ದು, ಇದು ಸಾಮಾಜಿಕ, ಆರ್ಥಿಕ, ರಾಜಕೀಯ, ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಬದಲಾವಣೆ ತರುವ ಚಲನಾತ್ಮಕ ಕ್ರಿಯೆಯಾಗಿರುತ್ತದೆ. ಅಭಿವೃದ್ಧಿ ಎನ್ನುವುದು ಇಂದು ಅತ್ಯಂತ ಜನಜನಿತವಾದ ಒಂದು ಪರಿಭಾವನೆಯಾಗಿದೆ. ಅಭಿವೃದ್ಧಿ ಎಂದರೆ ಸಾಮಾನ್ಯ ಅರ್ಥದಲ್ಲಿ ಪ್ರಗತಿ ಪಥದತ್ತ ಮುನ್ನಡೆಯುವುದು ಎಂದು ಅಭಿವೃದ್ಧಿ ಎನ್ನುವುದು ಕೆಳಮಟ್ಟದಿಂದ ಮೇಲ್ಮಟ್ಟಕ್ಕೆ ಬದಲಾವಣೆಯಾಗುವಂಥ ಒಂದು ಕ್ರಿಯೆ. ಅಭಿವೃದ್ಧಿ ಎಂದರೆ ಕೇವಲ ಆರ್ಥಿಕಾಭಿವೃದ್ಧಿ ಎಂದು ಅರ್ಥವಲ್ಲ. ಅಭಿವೃದ್ಧಿಗೆ ವಿಶಾಲವಾದ ಅರ್ಥವಿದ್ದು, ಸಾಮಾಜಿಕ ಅಭಿವೃದ್ಧಿಯೇ ನಿಜವಾದ ಅಭಿವೃದ್ಧಿ ಎಂಬುದು ಬಹುಮುಖ್ಯವಾದ ಅಂಶ. ಜೀವನ ಮಟ್ಟದಲ್ಲಿ ಸುಧಾರಣೆ, ಮಾನವೀಯ ಮೌಲ್ಯಗಳನ್ನು ಎತ್ತಿ ಹಿಡಿಯುವಂತ ಸಾಮಾಜಿಕ ವ್ಯವಸ್ಥೆಯ ನಿರ್ಮಾಣ, ಮೂಲಭೂತ ಅವಶ್ಯಕತೆಗಳನ್ನು ಪೂರೈಸಿಕೊಳ್ಳುವ, ಇನ್ನೂ ಹತ್ತು ಹಲವು ಪರಿಸ್ಥಿತಿಗಳು ಆರ್ಥಿಕ ಬೆಳವಣಿಗೆಯ ಜೊತೆ ಜೊತೆಗೆ ನಿರ್ಮಾಣವಾದಾಗ ಮಾತ್ರ ಅಭಿವೃದ್ಧಿ ಒಂದು ನಿಜವಾದ ಅರ್ಥದಲ್ಲಿ ಉಂಟಾಗುವುದು. ಅಭಿವೃದ್ಧಿ ಎನ್ನುವುದು ಹಿಂದುಳಿದ ರಾಷ್ಟ್ರಗಳ ಒಂದು ಷರತ್ತಾಗಿದೆ.

ಮೂವತ್ತರ ದಶಕದ ಮಹಾ ಆರ್ಥಿಕ ಮುಗ್ಗಟ್ಟು ಮತ್ತು ದ್ವಿತೀಯ ಮಹಾ ಯುದ್ಧದ ನಂತರ ವಸಾಹತು ಶಾಹಿಯಿಂದ ಮುಕ್ತಗೊಂಡ ಹಾಗೂ ಹೊಸದಾಗಿ ಹುಟ್ಟಿಕೊಂಡ ದೇಶಗಳು ತಮ್ಮ ಗಮನವನ್ನು ಅಭಿವೃದ್ಧಿಯತ್ತ ಹರಿಸಿದವು. ೧೯೭೦ ರ ದಶಕದಲ್ಲಿ ಅನೇಕ ದೇಶಗಳ ಪರಿಸ್ಥಿತಿ ನಿರೀಕ್ಷಿಸಿದ್ದಕ್ಕಿಂತ ವಿರುದ್ಧವಾದ ದಿಕ್ಕಿನಲ್ಲಿ ಚಲಿಸಿದ್ದು ಕಂಡು ಬಂದಿತು. ಆರ್ಥಿಕ ಬೆಳವಣಿಗೆಯ ಜೊತೆ ಬಡತನವೂ ಹೆಚ್ಚಾಗುತ್ತಿತ್ತು. ಈ ಹಂತದಲ್ಲಿ ಅಭಿವೃದ್ಧಿ ಎಂಬ ಪರಿಕಲ್ಪನೆಯು ವ್ಯಾಖ್ಯೆಯ ಬದಲಾಗಿ ಹೆಚ್ಚು ವಿಶಾಲವಾದ ಅರ್ಥವನ್ನು ಪಡೆದುಕೊಂಡಿತು. ಅಭಿವದ್ಧಿಯನ್ನು ಅಳೆಯುವ ಮತ್ತು ಅಭಿವೃದ್ಧಿ

ಕಾರ್ಯಗಳನ್ನು ಕೈಗೊಳ್ಳುವ ವಿಚಾರದಲ್ಲಿ ಆರ್ಥಿಕ ಅಂಶಗಳ ಜೊತೆಗೆ ಆರ್ಥಿಕೇತರ ಅಂಶಗಳನ್ನು ಅಭಿವೃದ್ಧಿಯ ಮಟ್ಟವನ್ನು ಅಳೆಯುವ ಮಾಪಕದಲ್ಲಿ ಸೇರಿಸಲಾಯಿತು. ಅಭಿವೃದ್ಧಿಯ ಹೊಸ ವ್ಯಾಖ್ಯಾನದಲ್ಲಿ ಬಡತನ ನಿರ್ಮೂಲನೆ, ಪೂರ್ಣಉದ್ಯೋಗನೀಡುವಿಕೆ, ಸಮಾನಹಂಚಿಕೆ, ಸಾಮಾಜಿಕನ್ಯಾಯ ಮುಂತಾದ ಆರ್ಥಿಕೇತರ ಅಂಶಗಳಿಗೆ ಹೆಚ್ಚಿನ ಒತ್ತನ್ನು ನೀಡಲಾಯಿತು. ವಿಶೇಷವಾಗಿ ಅಭಿವೃದ್ಧಿಶೀಲ ಸಮಾಜಗಳ ಸನ್ನಿವೇಶದಲ್ಲಿ ಅಭಿವೃದ್ಧಿ ಎಂಬ ಪದವನ್ನು ವಿವರಿಸಲಾಯಿತು. ಕೇವಲ ಉತ್ಪನ್ನ, ಆದಾಯ ಬಂಡವಾಳ ಹೂಡಿಕೆಯನ್ನು ಹೆಚ್ಚಿಸಿದರೆ ಅಭಿವೃದ್ಧಿಯನ್ನು ಹೊಂದಲು ಸಾಧ್ಯವಿಲ್ಲ. ಅವುಗಳ ಜೊತೆ ಸಾಮಾಜಿಕ ಅಂಶಗಳು ಎಂದರೆ ಜೀವನ ಮಟ್ಟವನ್ನು ಸುಧಾರಿಸುವುದು, ಮೂಲಭೂತ ಸೌಕರ್ಯಗಳಾದ ಆಹಾರ, ಆರೋಗ್ಯ ಶಿಕ್ಷಣ ಸಾರಿಗೆ ವ್ಯವಸ್ಥೆ, ಕುಡಿಯುವ ನೀರು ಮುಂತಾದವುಗಳನ್ನು ನೀಡುವುದರ ಮೂಲಕ ಅಭಿವೃದ್ಧಿಯನ್ನು ಸಾಧಿಸಬಹುದು ಎಂಬ ಅಂಶವನ್ನು ಎತ್ತಿ ಹಿಡಿಯಲಾಯಿತು.

ಅಭಿವೃದ್ಧಿಯ ಅಳೆಯುವಿಕೆಯಲ್ಲಿ ಸಾಕ್ಷರತೆ, ಮರಣಪ್ರಮಾಣ, ಆಯುಮಾನ, ಜೀವನದ ಭೌತಿಕ ಗುಣಮಟ್ಟ ಮುಂತಾದ ಆರ್ಥಿಕೇತರ ಅಂಶಗಳು ಸೇರಿಕೊಂಡವು. ಒಟ್ಟಿನಲ್ಲಿ ಅಭಿವೃದ್ಧಿಯು ಅಭಿವೃದ್ಧಿಶೀಲ ರಾಷ್ಟ್ರಗಳ ಸನ್ನಿವೇಶಗಳಲ್ಲಿ ವಿಶ್ಲೇಷಿಸಬೇಕಾದಂತಹ ಒಂದು ಪರಿಕಲ್ಪನೆಯಾಗಿ ಬೆಳೆದು ಬಂದಿದೆ. ಮೈಯರ್ ಮತ್ತು ಬಾಲ್ಡ್‌ವಿನ್ ಅವರು, "ರಾಷ್ಟ್ರಗಳ ಬಡತನದ ಅಧ್ಯಯನವು ರಾಷ್ಟ್ರಗಳ ಸಂಪತ್ತಿನ ಅಧ್ಯಯನಕ್ಕಿಂತ ಹೆಚ್ಚು ಜರೂರು ಸಮಸ್ಯೆಯಾಗಿದೆ ಎನ್ನುತ್ತಾರೆ. ಆದ್ದರಿಂದಲೇ ಗ್ರಾಮೀಣ ಬಡತನವನ್ನು ಅಧ್ಯಯನ ಮಾಡುವುದು ಅತಿ ಜರೂರು ಕೆಲಸವಾಗಿದೆ.

ಅರ್ಥಶಾಸ್ತ್ರಜ್ಞರು ಅಭಿವೃದ್ಧಿಗೆ ನೀಡಿರುವ ಕೆಲವು ವ್ಯಾಖ್ಯಾನಗಳನ್ನು ಇಲ್ಲಿ ಹೆಸರಿಸಬಹುದು.

ತೊದಾರೊ ಅವರ ಪ್ರಕಾರ "ಸಾಮಾಜಿಕ, ಆರ್ಥಿಕ ಮತ್ತು ಸಾಂಸ್ಥಿಕ ಪ್ರಕ್ರಿಯೆಯ ಮೂಲಕ ಉತ್ತಮ ಜೀವನವನ್ನು ಪಡೆಯಲು ಸಮಾಜವು ಹೊಂದಿರುವ ಭೌತಿಕ ಮತ್ತು ಮಾನಸಿಕ ಸ್ಥಿತಿಯೇ ಅಭಿವೃದ್ಧಿ".

ಬೆಜೋರ ಹ್ಯಾಟ್ನೆ ಹೇಳುವಂತೆ "ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ಕ್ಷೇತ್ರಗಳಲ್ಲಿ ಬದಲಾವಣೆ ತಂದು ಅದರ ಎಲ್ಲಾ ಗುಂಪಿನ ಜನರು ಭಾಗವಹಿಸುವಂತೆ ಮಾಡುವ ಪ್ರಕ್ರಿಯೆಯೇ ಅಭಿವೃದ್ಧಿ" ವಿಶ್ವಸಂಸ್ಥೆಯ ತಜ್ಞರ ಸಮಿತಿ ಪ್ರಕಾರ ಅಭಿವೃದ್ಧಿಯು ಮಾನವನ ಭೌತಿಕ ಅಗತ್ಯತೆಗಳನ್ನು ಮಾತ್ರವಲ್ಲದೆ ಅವನ ಜೀವನದ ಸಾಮಾಜಿಕ ಸ್ಥಿತಿಯ ಸುಧಾರಣೆಯನ್ನು ಕೂಡಾ ಒಳಗೊಂಡಿದೆ. ಹಾಗಾಗಿ ಅಭಿವೃದ್ಧಿಯೆಂದರೆ ಆರ್ಥಿಕ ಬೆಳವಣಿಗೆ ಮಾತ್ರವಲ್ಲ. ಸಾಮಾಜಿಕ, ಸಾಂಸ್ಕೃತಿಕ, ಸಾಂಸ್ಥಿಕ, ಆರ್ಥಿಕ

ಬೆಳವಣಿಗೆಯು ಕೂಡಾ ೧೯೮೦ ಮತ್ತು ೧೯೯೦ ದಶಕಗಳಲ್ಲಿ ಅಭಿವೃದ್ಧಿ ಪರಿಕಲ್ಪನೆಯು ಸ್ವಲ್ಪ ಮಟ್ಟಿನ ಬದಲಾವಣೆಗಳನ್ನು ಕಂಡಿತು. ಅಭಿವೃದ್ಧಿಯು ಮೂಲಭೂತವಾಗಿ ಜನಾಭಿವೃದ್ಧಿಯಾಯಿತು. ಅಭಿವೃದ್ಧಿಯಲ್ಲಿ ಪರಿಸರ ಸಂರಕ್ಷಣೆ, ಮಾನವ ಅಭಿವೃದ್ಧಿ, ಮಾನವ ಹಕ್ಕುಗಳು ಹಾಗೂ ನಿರಂತರತೆಯ ಲಕ್ಷಣವನ್ನು ಹೊಂದಿರುವ ಅಭಿವೃದ್ಧಿ ಅಂಶಗಳು ಸೇರಿಕೊಂಡವು. ಅಭಿವೃದ್ಧಿಯ ಪರಿಕಲ್ಪನೆಯಲ್ಲಿ ಸ್ವನಂಬಿಕೆ, ಸ್ವ–ಸಾಮರ್ಥ್ಯ ಹಾಗೂ ಅಧಿಕ ಜನರ ಒಳಿತಿಗೆ ಹೆಚ್ಚು ಒತ್ತು ನೀಡಲಾಯಿತು. ಲಿಂಗ ವ್ಯವಸ್ಥೆ, ಜನಾಂಗೀಯ, ಧಾರ್ಮಿಕ, ಪ್ರಾದೇಶಿಕ ಮತ್ತು ದೇಶಗಳ ಗಡಿಗಳನ್ನು ದಾಟಿ ಎಲ್ಲಾ ಜನರ ಆರ್ಥಿಕ ರಾಜಕೀಯ ಮತ್ತು ನಾಗರಿಕ ಹಕ್ಕುಗಳನ್ನು ಹೆಚ್ಚಿಸುವುದೇ ಅಭಿವೃದ್ಧಿ ಎಂದು ವಿಶ್ವ ಬ್ಯಾಂಕಿನ ವ್ಯಾಖ್ಯೆ ಹೇಳುತ್ತದೆ. (ವಿಶ್ವ ಅಭಿವೃದ್ಧಿ ವರದಿ ೧೯೯೧)

ಸಮಕಾಲೀನ ಸಮಾಜಗಳಲ್ಲಿ ಅದರಲ್ಲೂ ವಿಶೇಷವಾಗಿ ಅಭಿವೃದ್ಧಿಶೀಲ ಸಮಾಜಗಳಲ್ಲಿ ಮೂಲಭೂತ ಅವಶ್ಯಕತೆಗಳನ್ನು ಪೂರೈಸುವುದು, ಜೀವನದ ಗುಣಮಟ್ಟವನ್ನು ಹೆಚ್ಚಿಸುವುದು ಮತ್ತು ಪರಾವಲಂಬಿತನದಿಂದ ಮುಕ್ತಿ ಹೊಂದುವುದು ಇವು ಅಭಿವೃದ್ಧಿಯ ಮೂರು ಮುಖ್ಯ ಗುರಿಗಳಾದವು. ಅದೇನೇ ಇದ್ದರೂ ಅಭಿವೃದ್ಧಿ ಎಂಬುದು ವ್ಯಕ್ತಿಯಿಂದ ವ್ಯಕ್ತಿಗೆ ದೇಶದಿಂದ ದೇಶಕ್ಕೆ ಸಮಾಜದಿಂದ ಸಮಾಜಕ್ಕೆ ಕಾಲದಿಂದ ಕಾಲಕ್ಕೆ ಭಿನ್ನವಾಗುವಂತಹ ಪರಿಕಲ್ಪನೆ ಹಾಗೂ ಪ್ರಕ್ರಿಯೆಯಾಗಿದೆ.

ಅಭಿವೃದ್ಧಿ ಎಂದರೆ ಮಾನವನ ಜೀವನವನ್ನು ಉತ್ತಮಗೊಳಿಸುವ ಒಂದು ದೀರ್ಘಾವಧಿ ಪ್ರಕ್ರಿಯೆ. ಅಭಿವೃದ್ಧಿಯ ಅಂತರಾರ್ಥ ಜೀವನದ ಗುಣಮಟ್ಟವನ್ನು ಹೆಚ್ಚಿಸುವುದು. ಅಭಿವೃದ್ಧಿಯು ಏಕಮುಖ ಪ್ರಕ್ರಿಯೆಯಲ್ಲ. ಅಂದರೆ ಅಭಿವೃದ್ಧಿಯು ಹೇರಲ್ಪಡುವ ವಿಷಯವಲ್ಲ. ಅದು ಆಂತರಿಕ ತುಡಿತ. ಸರಕಾರ ಅಭಿವೃದ್ಧಿ ಕಾರ್ಯಕ್ರಮಗಳನ್ನು ಹಾಕಿಕೊಳ್ಳಬಹುದು. ಅಷ್ಟರಿಂದಲೇ ಅಭಿವೃದ್ಧಿ ಸಾಧಿಸಲು ಸಾಧ್ಯವಿಲ್ಲ. ಜನರು ಸ್ವ ಪ್ರೇರಣೆಯಿಂದ ಅಭಿವೃದ್ಧಿ ಕಾರ್ಯಕ್ರಮಗಳನ್ನು ಪ್ರೋತ್ಸಾಹಿಸಿ ತಾವು ನೇರವಾಗಿ ಕಾರ್ಯಕ್ರಮಗಳಲ್ಲಿ ಭಾಗಿಗಳಾದರೆ ಅಭಿವೃದ್ಧಿ ಪ್ರಕ್ರಿಯೆ ಸುಲಭವಾಗುತ್ತದೆ.

ಹೀಗೆ ಆರ್ಥಿಕ ಅಭಿವೃದ್ಧಿಗೆ ಹಲವು ಆಯಾಮಗಳಿವೆ. ಆರ್ಥಿಕ ಅಭಿವೃದ್ಧಿ ಎನ್ನುವುದು ಒಂದು ನಿರಂತರ ಪ್ರಕ್ರಿಯೆ. ಒಳ್ಳೆಯ ಸರಕಾರ, ಒಳ್ಳೆಯ ವಾತಾವರಣ ಮತ್ತು ಒಳ್ಳೆಯ ಜನರಿಂದ ಅಭಿವೃದ್ಧಿ ಸಾಧನೆ ಶೀಘ್ರ ಸಾಧ್ಯವಾಗುತ್ತದೆ. ಇಂದು ಕಂಡು ಬರುವ ಬಡತನ, ನಿರುದ್ಯೋಗ, ಆದಾಯ ಅಸಮಾನತೆ, ಜನಸಂಖ್ಯಾ ಸಮಸ್ಯೆ ಅನಭಿವೃದ್ಧಿಯ ಸಮಸ್ಯೆ ಪೌಷ್ಟಕಾಂಶದ ಕೊರತೆ, ಗ್ರಾಮೀಣ ನಿರುದ್ಯೋಗ ಮುಂತಾದ ಅಂಶಗಳು ಅಭಿವೃದ್ಧಿಯ ಕುರಿತಾದ ಅಧ್ಯಯನವನ್ನು ಅನಿವಾರ್ಯಗೊಳಿಸಿವೆ.

## ೩.೨. ಗ್ರಾಮೀಣ ಉದ್ಯೋಗದ ನಿರೂಪಣೆ (ಪರಿಕಲ್ಪನೆ)

ಅಭಿವೃದ್ಧಿಯ ಪರಿಕಲ್ಪನೆ ಮತ್ತು ಪ್ರಕ್ರಿಯೆಯಲ್ಲಿ ಗ್ರಾಮೀಣ ಜನರ ಪಾತ್ರ ಏನು ಎಂಬುದನ್ನು ತಿಳಿಯಲು ಗ್ರಾಮೀಣಾಭಿವೃದ್ಧಿ ಎಂಬ ವಿಷಯವನ್ನು ಅಧ್ಯಯನ ಮಾಡಬೇಕಾಗುತ್ತದೆ. ಅಭಿವೃದ್ಧಿ ಎಂಬ ಪರಿಕಲ್ಪನೆಯನ್ನು ಮುಖ್ಯವಾಹಿನಿ ಅಭಿವೃದ್ಧಿ ಪರಿಕಲ್ಪನೆಯ ಬೆಳವಣಿಗೆ ಮತ್ತು ಪ್ರಕ್ರಿಯೆಯೊಂದಿಗೆ ಅಧ್ಯಯನ ಮಾಡಬೇಕಾಗುತ್ತದೆ. ಗ್ರಾಮೀಣಾಭಿವೃದ್ಧಿ ಸಮಸ್ಯೆಗಳು ಪ್ರಾಥಮಿಕ ಆದ್ಯತೆಯನ್ನು ಹೊಂದಿದ, ಬಹು ಚರ್ಚಿತ ಮತ್ತು ವಿವಾದಗ್ರಸ್ತವಾದ ವಿಷಯಗಳಾಗಿವೆ. ಪ್ರಥಮ ಪಂಚವಾರ್ಷಿಕ ಯೋಜನೆಯ ಕಾಲದಿಂದಲೂ ಗ್ರಾಮೀಣ ಸಮಸ್ಯೆಗಳೆಡೆಗೆ ಗಮನ ಸೆಳೆಯಲಾಗಿದೆ. ಭಾರತದ ಜನಸಂಖ್ಯೆಯ ಪ್ರತಿಶತ ೨೦ ರಷ್ಟು ಜನರು ಸುಮಾರು ೫ ದಶಲಕ್ಷ ಹಳ್ಳಿಗಳಲ್ಲಿ ವಾಸಿಸುತ್ತಾರೆ. ಅವರು ತಮ್ಮ ಜೀವನೋಪಾಯಕ್ಕಾಗಿ ಕೃಷಿಯ ಆರ್ಥಾತ್ ೧ ಲಕ್ಷ ಕೋಟಿಗಿಂತಲೂ ಹೆಚ್ಚಾಗಿದ್ದು, ಒಟ್ಟು ಜನಸಂಖ್ಯೆಯ ಪ್ರತಿಶತ ಶೇಕಡ ೩೦ ರಷ್ಟು ಜನರು 'ದಾರಿದ್ರ್ಯ ರೇಖೆ'ಯ ಕೆಳಗೆ ಜೀವಿಸುತ್ತಾರೆ. ಭಾರತ ಸ್ವತಂತ್ರವಾಗಿ ೬೦ ವರ್ಷ ಗತಿಸಿದರೂ ಸಹ ಗ್ರಾಮೀಣ ದಾರಿದ್ರ್ಯ ಮುಂದುವರೆದಿದೆ. ಕಳೆದ ಮೂರು ದಶಕಗಳಲಿ, ಭಾರತದ ಜನಸಂಖ್ಯೆಯು ಸ್ಥಿರವಿರುವಂತೆ ಕಂಡು ಬಂದಿದೆ. ಆದರೆ ೧೯೬೧ ರಿಂದ ೨೦೦೦ ರ ಅವಧಿಯಲ್ಲಿ ಪ್ರತಿಶತ ೫೨ ರಿಂದ ೬೨ ರಷ್ಟು ದುಡಿಯುವ ವಯೋಮಾನದ (೧೫ ರಿಂದ ೫೧ ವರ್ಷ) ಜನಸಂಖ್ಯೆಯಲ್ಲಿ ಸಾಕಷ್ಟು ಹೆಚ್ಚಳವಾಗಿದೆ. ಪ್ರತಿ ದಿನ ಲಕ್ಷಾಂತರ ಗ್ರಾಮೀಣ ಜನರು ಉದ್ಯೋಗವಿಲ್ಲದೆ ಕಾಲಹರಣ ಮಾಡುತ್ತಾರೆ.

ದೇಶದ ಶೇ. ೬೦ ರಷ್ಟು ಜನರು ಗ್ರಾಮಗಳಲ್ಲಿ ವಾಸಿಸುತ್ತಿರುವುದರಿಂದ ಅಭಿವೃದ್ಧಿಗೆ ಸಂಬಂಧಪಟ್ಟ ಯಾವುದೇ ಕಾರ್ಯನೀತಿ ಹಳ್ಳಿಗಳ ಸಾಮಾಜಿಕ ಮತ್ತು ಆರ್ಥಿಕ ಅಭಿವೃದ್ಧಿಯನ್ನು ಕೇಂದ್ರವಾಗಿಸಬೇಕು. ಇಂದು ಗ್ರಾಮೀಣ ಅಭಿವೃದ್ಧಿ ಎಂಬುದು ಇಡೀ ಆರ್ಥಿಕ ಮತ್ತು ಸಾಮಾಜಿಕ ವ್ಯವಸ್ಥೆಯ ಮರುಸಂಘಟನೆ ಮತ್ತು ಮರು ಸ್ಥಾಪನೆಯನ್ನು ಹೊಂದಿರುವ ಬಹು ಆಯಾಮವುಳ್ಳ ಪ್ರಕ್ರಿಯೆಯನ್ನಾಗಿ ಬಿಂಬಿಸಲಾಗುತ್ತದೆ. ಗ್ರಾಮೀಣ ಅಭಿವೃದ್ಧಿ ಎಂಬ ಪರಿಕಲ್ಪನೆ ಗ್ರಾಮೀಣ ವಾಸಿಗಳ ಜೀವನ ಮಟ್ಟವನ್ನು ಉತ್ತಮಪಡಿಸುವುದು, ಅದರಲ್ಲೂ ಹಳ್ಳಿಗಳ ಮಾನವ ಸಂಪನ್ಮೂಲವನ್ನು ಅಭಿವೃದ್ಧಿಪಡಿಸುವುದರೊಂದಿಗೆ ಹಳ್ಳಿಗಳ ಸರ್ವತೋಮುಖ ಬೆಳವಣಿಗೆಯಾಗಿದೆ.

ಗ್ರಾಮೀಣಾಭಿವೃದ್ಧಿಯು ಗ್ರಾಮೀಣ ಜನರ ಜೀವನ ಮಟ್ಟದಲ್ಲಿ ಸಂಖ್ಯಾ ಅಭಿವೃದ್ಧಿಗೆ ದಾರಿ ಮಾಡಿಕೊಡುವ ಒಂದು ಪ್ರಕ್ರಿಯೆ. ಗ್ರಾಮೀಣ ಅಭಿವೃದ್ಧಿಯು ಒಟ್ಟು ಅಭಿವೃದ್ಧಿಯ ಪೂರ್ವಾವಶ್ಯಕತೆಯಾಗಿದ್ದು, ಹೆಚ್ಚಿನ ಆದ್ಯತೆಯ ಅವಶ್ಯಕತೆಯಿದೆ.

ಭಾರತದ ಒಟ್ಟು ಶ್ರಮಜೀವಿಗಳು ಸುಮಾರು ೧೦೦ ದಶಲಕ್ಷದಷ್ಟಿದ್ದು ಅವರಲ್ಲಿ ಅರ್ಧಕ್ಕಿಂತಲೂ ಹೆಚ್ಚು ರೈತರು ಸಣ್ಣ ಮತ್ತು ಅತಿ ಸಣ್ಣ ರೈತರು ಮತ್ತು ಕೃಷಿ ಕಾರ್ಮಿಕರಿದ್ದಾರೆ. ಇಂತಹ ಸಂದಿಗ್ದ ಪರಿಸ್ಥಿತಿಯಲ್ಲಿ ಗ್ರಾಮೀಣ ಜನರು ಉದ್ಯೋಗ ಹುಡುಕಿಕೊಂಡು ಕೈಗಾರಿಕಾ ನಗರಗಳಿಗೆ ವಲಸೆ ಹೋಗುತ್ತಾರೆ. ಕೃಷಿ ಕ್ಷೇತ್ರದ ಮೇಲೆ ಒತ್ತಡ, ಹಾನಿಕಾರಕ ಸಣ್ಣ ಹಿಡುವಳಿ, ಅನುತ್ಪಾದಕತೆ ಮತ್ತು ಸಂಪನ್ಮೂಲಗಳ ಅಭಾವದಿಂದ ಗ್ರಾಮೀಣ ಅರ್ಥವ್ಯವಸ್ಥೆಯು ಹಲವಾರು ಸಂಕೀರ್ಣ ಸಮಸ್ಯೆಗಳನ್ನು ಎದುರಿಸುತ್ತದೆ.

ಗ್ರಾಮೀಣ ಕುಶಲಕರ್ಮಿಗಳು (ಕುಂಬಾರ, ಕಮ್ಮಾರ ಮತ್ತು ಬಡಗಿ ಇತ್ಯಾದಿ) ದಾರಿದ್ರ್ಯ ರೇಖೆಯ ಕೆಳಗೆ ಜೀವಿಸುತ್ತಾರೆ. ಗ್ರಾಮೀಣ ಕರಕುಶಲ ವಸ್ತುಗಳು ಅಥವಾ ಉತ್ಪನ್ನಗಳಿಗೆ ಹೊಸ ತಲೆಮಾರಿನ ಜನರಿಗೆ ಅನಾಸಕ್ತಿ, ಅನಾದರ, ಗ್ರಾಮೀಣ ವಸ್ತುಗಳಿಗೆ ಕಡಿಮೆ ಬೆಲೆ, ನ್ಯಾಯಸಮ್ಮತವಾದ ಉದ್ಯೋಗದ ಅಭಾವ, ಸ್ಥಳೀಯ ಕಚ್ಚಾವಸ್ತುಗಳ ಅಸಮರ್ಪಕ ಬಳಕೆ, ನೂತನ ಪೀಳಿಗೆಯ ಕುಶಲ ಕರ್ಮಿಗಳ ಮಕ್ಕಳಿಂದ ಜೀವನೋಪಾಯಕ್ಕಾಗಿ ಅನ್ಯ ಚಟುವಟಿಕೆಗಳ ಆಯ್ಕೆ ಇತ್ಯಾದಿ ಕಾರಣಗಳಿಂದ ಗ್ರಾಮೀಣ ಕುಶಲಕರ್ಮಿಗಳು ಸಮಸ್ಯೆಯ ವಿಷವರ್ತುಲದಲ್ಲಿ ಸಿಲುಕಿದ್ದಾರೆ. ಇತ್ತೀಚಿನ ದಿನಗಳಲ್ಲಿ ಗ್ರಾಮೀಣ ಕುಶಲ ಕರ್ಮಿಗಳೂ ಸಹ ಬೇರೆ ಉದ್ಯೋಗಗಳಿಗೆ ಅವಲಂಬಿಸಬೇಕಾದ ಸ್ಥಿತಿ ಗ್ರಾಮೀಣ ಪ್ರದೇಶಗಳಲ್ಲಿ ಉಂಟಾಗಿದೆ.

### ೩.೩. ಗ್ರಾಮೀಣಾಭಿವೃದ್ಧಿಯ ಮಹತ್ವ

ನೈಜ ಭಾರತವನ್ನು ಹಳ್ಳಿಯಲ್ಲಿ ಕಾಣಬಹುದು. "ಹಳ್ಳಿಗಳ ಅಭಿವೃದ್ಧಿಯೇ ಭಾರತದ ಅಭಿವೃದ್ಧಿ ಹಳ್ಳಿಗಳನ್ನು ಅಲಕ್ಷಿಸಿ ಭಾರತ ಅಭಿವೃದ್ದಿಗೊಳ್ಳುವುದು ಸಾಧ್ಯವಿಲ್ಲ" ಎಂಬುದು ಗಾಂಧೀಜಿಯವರ ಅಭಿಮತವಾಗಿದ್ದಿತು. ಆದರೆ ಇಂದಿಗೂ ಕಳೆದ ೫ ದಶಕಗಳ ಅಭಿವೃದ್ಧಿಯ ಕಾರ್ಯಕ್ರಮಗಳು ಗ್ರಾಮೀಣ ಭಾಗದ ಜನರ ಸಮಸ್ಯೆಗಳನ್ನು ನಿವಾರಿಸುವಲ್ಲಿ ವಿಫಲಗೊಮಡಿದ್ದು, ಗ್ರಾಮೀಣ ಭಾರತ ಹಲವು ಸಮಸ್ಯೆಗಳ ಆಗರವಾಗಿಯೇ ಉಳಿದುಕೊಂಡಿದೆ. ಬಡತನ, ನಿರುದ್ಯೋಗ, ಮೂಲಭೂತ ಸೌಕರ್ಯಗಳ ಅಭಾವ ಮುಂತಾದ ಸಮಸ್ಯೆಗಳು ಗ್ರಾಮೀಣ ಭಾರತ ಎದುರಿಸುತ್ತಿರುವ ಗಂಭೀರ ಸಮಸ್ಯೆಗಳಾಗಿವೆ. ಗ್ರಾಮಗಳ ಅಭಿವೃದ್ಧಿಯಾಗದೆ ದೇಶದ ಅಭಿವೃದ್ಧಿ ಸಾಧ್ಯವಿಲ್ಲದ ಮಾತು. ಈ ಹಿನ್ನಲೆಯಲ್ಲಿ ಗ್ರಾಮೀಣ ಭಾಗದಲ್ಲಿರುವ ನಿರುದ್ಯೋಗ ಮತ್ತು ಬಡತನ ಸಮಸ್ಯೆಗಳ ಗಂಭೀರತೆಯನ್ನು ಅರ್ಥ ಮಾಡಿಕೊಳ್ಳದಿದ್ದರೆ ನಕ್ಸಲೀಸಂ ನಂತಹ ಸಮಸ್ಯೆಗಳು ಹುಟ್ಟಿಕೊಳ್ಳಲು ಕಾರಣವಾಗುತ್ತದೆ. ರಾಷ್ಟ್ರೀಯ ಉದ್ಯೋಗ ಖಾತರಿ

ಯೋಜನೆಯಂತಹ ಕಾರ್ಯಕ್ರಮಗಳನ್ನು ಸಮರ್ಪಕವಾಗಿ ಅನುಷ್ಠಾನಕ್ಕೆ ತರುವ ಮೂಲಕ ಗ್ರಾಮೀಣ ಸಮಸ್ಯೆಗಳಿಗೆ ಪರಿಹಾರ ಕಂಡುಕೊಳ್ಳಬಹುದು.

## ಗ್ರಾಮೀಣ ಬಡತನ

ಭಾರತ ಎದುರಿಸುತ್ತಿರುವ ಅನೇಕ ಸಮಸ್ಯೆಗಳಲ್ಲಿ ಬಡತನವೂ ಒಂದಾಗಿದೆ. ೫ ದಶಕಗಳ ಆರ್ಥಿಕ ಯೋಜನೆಗಳ ಫಲವಾಗಿಯೂ ಬಡತನ ಸಮಸ್ಯೆ ಗಂಭೀರವಾಗಿಯೇ ಉಳಿದುಕೊಂಡಿದೆ. ಗ್ರಾಮೀಣ ಭಾರತೀಯರು ತಮಗೊಂದು ಭವಿಷ್ಯವನ್ನೇ ಕಾಣದಂತಹ ಸ್ಥಿತಿಯಲ್ಲಿದ್ದಾರೆ. ನಗರ ಭಾರತಕ್ಕೂ ಗ್ರಾಮೀಣ ಭಾರತಕ್ಕೂ ಅಗಾಧವಾದ ವ್ಯತ್ಯಾಸ ಕಂಡು ಬರುತ್ತಿದೆ. ಗ್ರಾಮೀಣ ಭಾರತ ಅನೇಕ ಚಾರಿತ್ರಿಕ ಕಾರಣಗಳಿಂದ ಅಭಿವೃದ್ಧಿ ಪಥದಲ್ಲಿ ಹಿಂದೆ ಬಿದ್ದಿದೆ. ಅನೇಕ ಗ್ರಾಮೀಣಾಭಿವೃದ್ಧಿ ಯೋಜನೆಗಳು ಅನುಷ್ಠಾನಗೊಂಡರೂ ಅವುಗಳು ಯಶಸ್ವಿಗೊಂಡಿರುವ ಬಗ್ಗೆ ಅನೇಕ ಅನುಮಾನಗಳಿವೆ. ಆದಾಯ ಅಸಮಾನತೆ ಹೆಚ್ಚು ಕಂಡು ಬರುವುದು ಗ್ರಾಮೀಣ ಪ್ರದೇಶದಲ್ಲಿ.

ಬಡತನ ಎಂಬ ಪರಿಕಲ್ಪನೆಯನ್ನು ಒಂದು ನಿರ್ದಿಷ್ಟ ಅಳತೆಗೋಲಿನಿಂದ ಅಳೆಯುವುದು ಸಾಧ್ಯವಿಲ್ಲದ ಮಾತು. ಒಬ್ಬ ವ್ಯಕ್ತಿ ದಿನವೊಂದರಲ್ಲಿ ಎರಡು ಹೊತ್ತಿನ ಊಟಕ್ಕೆ ಪರದಾಡುತ್ತಿದ್ದರೆ ಆತನನ್ನು ಬಡತನ ರೇಖೆಗಿಂತ ಕೆಳಗಿರುವವನೆಂದು ನಿರ್ಧರಿಸಬೇಕಾಗುತ್ತದೆ. ಬಡತನವೆಂಬುದು ಜನರ ಭರವಸೆ ರಹಿತವಾದ ನಿಕೃಷ್ಟ ಜೀವನದ ಪರಿಸ್ಥಿತಿಯಾಗಿದ್ದು ಗ್ರಾಮೀಣ ಭಾಗದಲ್ಲಿ ಇಂತಹವರ ಪ್ರಮಾಣ ಅಧಿಕವಾಗಿದೆ.

ಜನಸಂಖ್ಯಾ ಸ್ಫೋಟ, ಜಮೀನ್ದಾರಿಪದ್ಧತಿ, ಕಡಿಮೆ ಉತ್ಪಾದಕತೆ, ಆದಾಯ ಅಸಮಾನತೆ, ಹಿಂದುಳಿದ ಕೃಷಿ, ನಿರುದ್ಯೋಗ, ಭೂ ಸುಧಾರಣೆಯ ದೋಷಗಳು, ಮೂಲ ಸೌಕರ್ಯದ ಕೊರತೆ ಮುಂತಾದವುಗಳಲ್ಲದೇ ಸಮಾಜಿಕ ಮತ್ತು ರಾಜಕೀಯ ಕಾರಣಗಳಾದ ಅನಕ್ಷರತೆ, ಅಜ್ಞಾನ, ಜಾತಿಪದ್ದತಿ , ಮುಂತಾದ ಸಾಮಾಜಿಕ ಕಾರಣಗಳು ಹಾಗೂ ಭ್ರಷ್ಟಾಚಾರ, ಲಂಚಗುಳಿತನ, ಅದಕ್ಷತೆ, ರಾಜಕೀಯ ವ್ಯವಸ್ಥೆ ಸ್ವಜನ ಪಕ್ಷಪಾತ ಮುಂತಾದ ರಾಜಕಿಯ ಅಂಶಗಳು ಗ್ರಾಮೀಣ ಭಾಗದ ಬಡತನ ಹೆಚ್ಚುವಂತೆ ಮಾಡಿದೆ.

ಭಾರತದಲ್ಲಿ ಬಡತನ ಲೆಕ್ಕಾಚರಕ್ಕೆ ಯಾವುದೇ ರೀತಿಯ ಗಂಭೀರ ಪ್ರಯತ್ನಗಳು ನಡೆದಿಲ್ಲ. ಇದರಿಂದಾಗಿ ಗ್ರಾಮೀಣ ಬಡತನದ ಬಗ್ಗೆ ಸರಿಯಾದ ಅಂಕಿ ಅಂಶಗಳು ಲಭ್ಯವಿಲ್ಲವಾಗಿವೆ. ನ್ಯಾಷನಲ್ ಸ್ಯಾಂಪಲ್ ಸರ್ವೆ (ಎನ್.ಎಸ್.ಎಸ್.) ಅಂಕಿ ಅಂಶಗಳ ಆಧಾರದ ಮೇಲೆ ಮಿನ್‌ವ್ಯಾಸ್, ಬಾರ್ಧಾನ್, ದಾಂಡೇಕರ್ ಮತ್ತು ರಾಥ್ ಮೊದಲಾದವರು ಗ್ರಾಮೀಣ ಬಡ ಜನರನ್ನು ಗುರುತಿಸಲು ಪ್ರಯತ್ನಿಸಿದ್ದಾರೆ.

ಇವರ ಪ್ರಕಾರ ಯಾವುದೇ ಭೂ ಹಿಡುವಳಿ ಹೊಂದಿರದ ಕೃಷಿ ಕುಟುಂಬಗಳೇ ಶೇ.೭೦ರಷ್ಟಿದೆ. ಅತೀ ಸಣ್ಣ ಭೂ ಹಿಡುವಳಿ ಹೊಂದಿರುವ ಕುಟುಂಬಗಳು ಶೇ.೪೦ರಷ್ಟಿದೆ. ದಾಂಡೇಕಾರ್ ಮತ್ತು ರಾಥ್ ಅವರ ಪ್ರಕಾರ ನಗರ ಪ್ರದೇಶಗಳಲ್ಲಿ ಕಂಡು ಬರುವ ಬಡವರೂ ಸಹ ಗ್ರಾಮೀಣ ಭಾಗದವರೇ ಆಗಿದ್ದು ಅವರು ಹಳ್ಳಿಗಳಿಂದ ನಗರ ಪ್ರದೇಶಗಳಿಗೆ ವಲಸೆ ಹೋದವರಾಗಿದ್ದಾರೆ. ಇವರಿಗೆ ಪೂರ್ಣ ಪ್ರಮಾಣದ ಉದ್ಯೋಗಗಳು ಗ್ರಾಮೀಣ ಭಾರತದಲ್ಲಿ ದೊರೆಯದಿರುವುದೇ ಆಗಿದೆ. ಪೂರ್ಣ ಪ್ರಮಾಣದ ಉದ್ಯೋಗ ಭರವಸೆ ಯೋಜನೆಗಳು ಜರೂರು ಜಾರಿಗೊಳಿಸುವುದು ಮುಖ್ಯವಾಗಿದೆ. ಆಗ ಮಾತ್ರ ನಗರ ಬಡತನ ಮತ್ತು ಗ್ರಾಮೀಣ ಬಡತನಕ್ಕಿರುವ ಅಂತರವನ್ನು ಕಡಿಮೆ ಮಾಡಬಹುದು.

## ೩.೪ ಭಾರತದಲ್ಲಿ ಗ್ರಾಮೀಣ ಅಭಿವೃದ್ಧಿ ಕಾರ್ಯಕ್ರಮಗಳು

ಭಾರತವು ಗ್ರಾಮೀಣ ಕ್ಷೇತ್ರದ ಪ್ರಾಬಲ್ಯ ಹೊಂದಿರುವ ದೇಶ. ಶೇ.೭೭ ರಷ್ಟು ಜನರು ಹಳ್ಳಿಗಳಲ್ಲಿ ವಾಸಿಸುತ್ತಿದ್ದಾರೆ. ಹಳ್ಳಿಗಳು ದೇಶದ ಬೆನ್ನೆಲುಬು ಇದ್ದಂತೆ ಎಂಬುದು ನಿಜ. ಆದರೆ ಬಹುತೇಕ ಸೌಲಭ್ಯಗಳಿಂದ ವಂಚಿತವಾಗಿರುವ ಹಳ್ಳಿಗಳು ದೇಶದ ಪ್ರಗತಿಗೆ ಸರಿಯಾದ ಕೊಡುಗೆ ಸಲ್ಲಿಸಲು ಅಸಮರ್ಥವಾಗಿವೆ. ಪ್ರಾದೇಶಿಕ ಅಸಮಾನತೆಗಳನ್ನು ತಗ್ಗಿಸುವ ಗ್ರಾಮೀಣ ಆರ್ಥಿಕತೆಯನ್ನು ಸುಧಾರಿಸುವ ಮತ್ತು ಗ್ರಾಮವಾಸಿ ಬಡಜನತೆಯ ಜೀವನಮಟ್ಟವನ್ನು ಉತ್ತಮಪಡಿಸುವ ಉದ್ದೇಶದಿಂದ ಸ್ವತಂತ್ರ ಭಾರತದಲ್ಲಿ ಹಲವಾರು ಗ್ರಾಮೀಣ ಅಭಿವೃದ್ಧಿ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗಿದೆ.

ಸ್ವಾತಂತ್ರ್ಯ ಪೂರ್ವದಲ್ಲಿ ದೇಶದ ವಿವಿಧ ಭಾಗಗಳಲ್ಲಿ ಕೆಲವು ವ್ಯಕ್ತಿ ಮತ್ತು ಸಂಸ್ಥೆಗಳಿಂದ ಗ್ರಾಮೀಣ ಅಭಿವೃದ್ಧಿಗಾಗಿ ಹಲವಾರು ಪ್ರಯತ್ನಗಳು ನಡೆದವು. ಮಹಾತ್ಮಾ ಗಾಂಧಿಯವರು ಸೇವಾ ಗ್ರಾಮದಲ್ಲಿ ಕೈಗೊಂಡ ಕಾರ್ಯಗಳು ರವೀಂದ್ರನಾಥ ಟ್ಯಾಗೋರರು ಶಾಂತಿನಿಕೇತನದಲ್ಲಿ ಮಾಡಿದ ಕೆಲಸ, ಗುರುಗಾಂವ್‌ನಲ್ಲಿ ಎಫ್.ಎಲ್.ಬೇನ್ ಕೈಗೊಂಡ ಕೆಲಸಗಳು ಉದಾಹರಣೆಗಳಾಗಿವೆ.

ಭಾರತ ಸರಕಾರದ ಆಶ್ರಯದಲ್ಲಿ ೧೮೭೧ ಡಿಸೆಂಬರ್‌ನಲ್ಲಿ ಕೃಷಿ ಇಲಾಖೆಯನ್ನು ಸ್ಥಾಪಿಸಲಾಯಿತು. ೧೮೮೨ರ ವೇಳೆಗೆ ದೇಶದ ಎಲ್ಲ ಪ್ರಾಂತ್ಯಗಳಿಗೆ ವಿಸ್ತರಿಸಲಾಯಿತು. ೧೯೦೫ರಲ್ಲಿ ಭಾರತ ಸರಕಾರವು ಬಿಹಾರದಲ್ಲಿ ಒಂದು ಕೃಷಿ ಸಂಶೋಧನಾ ಸಂಸ್ಥೆಯನ್ನು ಸ್ಥಾಪಿಸಿತು. ಇಷ್ಟೆಲ್ಲ ಪ್ರಯತ್ನಗಳ ನಡುವೆಯೂ ಹಳ್ಳಿಗಳು ನಿರ್ಲಕ್ಷಿತವಾಗಿ ಮತ್ತು ಅಸಂಘಟಿತವಾಗಿಯೇ ಉಳಿದವು. ಕೃಷಿ ವಲಯದಲ್ಲಿ ನಿರಾಶಾವಾದದ ವಾತಾವರಣವಿತ್ತು. ಈ ಅವಧಿಯಲ್ಲಿ ಭಾರತದಲ್ಲೇ ಹಲವು ಸುಧಾರಣೆಗಳನ್ನು ತರಲಾಯಿತು. ಕ್ಷಾಮ ಆಯೋಗಗಳನ್ನು ರಚಿಸಲಾಯಿತು.

೧೯೨೮ ರ ಕೃಷಿಯ ಮೇಲಿನ ರಾಯಲ್ ಆಯೋಗವು ಮಾಡಿದ ಶಿಫಾರಸ್ಸುಗಳ ಫಲವಾಗಿ ೧೯೨೯ ರಲ್ಲಿ ಇಂಪೀರಿಯಲ್ ಕೌನ್ಸಿಲ್ ಆಫ್ ಅಗ್ರಿಕಲ್ಚರ್ ರಿಸರ್ಚ್ ಸ್ಥಾಪಿಸಲ್ಪಟ್ಟಿತು. ಇದನ್ನೇ ಈಗ ಇಂಡಿಯನ್ ಕೌನ್ಸಿಲ್ ಆಫ್ ಅಗ್ರಿಕಲ್ಚರರ ರಿಸರ್ಚ್ ಎಂದು ಕರೆಯಲಾಗುತ್ತದೆ.

೧೯೫೨ ಕ್ಕಿಂತ ಹಿಂದೆ ಗ್ರಾಮೀಣ ಅಭಿವೃದ್ಧಿ ಕಾರ್ಯಕ್ರಮಗಳನ್ನು ಜಾರಿಗೊಳಿಸಲಾಯಿತು. ಮೊದಲ ಬಾರಿಗೆ ತರಲಾಗಿದ್ದ ಕೆಲವು ಕಾರ್ಯಕ್ರಮಗಳನ್ನು ಪುನರ್‌ರೂಪಿಸಲಾಗಿದೆ. ಕೆಲವು ಕಾರ್ಯಕ್ರಮಗಳನ್ನು ಕೈಬಿಡಲಾಗಿದೆ. ಕೆಲವು ಕಾರ್ಯಕ್ರಮಗಳ ಸ್ವರೂಪವನ್ನು ಸ್ವಲ್ಪ ಬದಲಾಯಿಸಿ ಹೊಸ ಹೆಸರು ನೀಡಲಾಗಿದೆ.

**೧. ಸಮುದಾಯ ಅಭಿವೃದ್ಧಿ ಕಾರ್ಯಕ್ರಮ**

**ಜಾರಿಗೆ ಬಂದ ವರ್ಷ ಅಕ್ಟೋಬರ್ ೨, ೧೯೫೨**

ಇಡೀ ಸಮುದಾಯದ ಹಿತಾಸಕ್ತಿಯಿಂದ ಸಂಪನ್ಮೂಲಗಳನ್ನು ಪರಿಣಾಮಕಾರಿಯಾಗಿ ಬಳಸಿಕೊಂಡು ಸರಕಾರ ಮತ್ತು ಜನತೆಯ ಪ್ರಯತ್ನಗಳಿಂದ ಗ್ರಾಮೀಣ ಸಮುದಾಯವನ್ನು ಪ್ರಗತಿಪಥದಲ್ಲಿ ಮುನ್ನಡೆಸುವ ಯೋಜನೆಯೇ ಸಮುದಾಯ ಅಭಿವೃದ್ಧಿ ಕಾರ್ಯಕ್ರಮ. ೧೯೫೨ರಲ್ಲಿ ಸಮದಾಯದ ಅಭಿವೃದ್ಧಿಉದ್ದೇಶದಿಂದ ೫೫ ಕ್ಷೇತ್ರಗಳನ್ನು ಆಯ್ಕೆ ಮಾಡಲಾಯಿತು. ಪ್ರತಿಯೊಂದು ಕ್ಷೇತ್ರವು ಸುಮಾರು ೩೦೦ ಹಳ್ಳಿಗಳು, ೧,೩೦೦ ಚ.ಕಿ.ಮೀ. ವಿಸ್ತೀರ್ಣ ಮತ್ತು ೨ ಲಕ್ಷ ಜನರನ್ನು ಒಳಗೊಂಡಿತ್ತು. ಆದರೆ ೧೯೫೮ ರಲ್ಲಿ ಇದನ್ನು ಪುನರ್ ವಿಮರ್ಶಿಸಲಾಯಿತು. ರಾಜ್ಯಮಟ್ಟದಲ್ಲಿ ಈ ಯೋಜನೆಯನ್ನು ರಾಜ್ಯದ ಅಭಿವೃದ್ಧಿ ಆಯುಕ್ತರು, ಜಿಲ್ಲಾಮಟ್ಟದಲ್ಲಿ ಜಿಲ್ಲಾ ಪಂಚಾಯಿತಿಗಳು ಅನುಷ್ಠಾನಕ್ಕೆ ತರುವರು. ಮೂರನೆ ಯೋಜನೆಯ ಕೊನೆಯವರೆಗೆ ಸಂಪೂರ್ಣ ಹಣವನ್ನು ಕೇಂದ್ರ ಸರಕಾರ ನೀಡುತ್ತಿತ್ತು. ನಾಲ್ಕನೆ ಯೋಜನೆಯ ಪ್ರಾರಂಭದಿಂದ ರಾಜ್ಯ ಸರಕಾರಗಳು ಹಣವನ್ನು ಪೂರೈಸುತ್ತಿವೆ. ಪ್ರತಿಯೊಂದು ಹಳ್ಳಿಯಲ್ಲಿ ಮುಖ್ಯ ರಸ್ತೆಯೊಡನೆ ಸಂಪರ್ಕಿಸುವುದು ಇದರ ಮುಖ್ಯ ಕಾರ್ಯಕ್ರಮವಾಗಿದೆ.

ಸಮುದಾಯ ಅಭಿವೃದ್ಧಿಯ ವಿವಿಧ ಕಾರ್ಯಕ್ರಮಗಳೆಂದರೆ ಕೃಷಿ ಅಭಿವೃದ್ಧಿ ಮತ್ತು ನೀರಾವರಿಯ ಸೌಲಭ್ಯಗಳ ಕಲ್ಪನೆ, ಸಂಪರ್ಕ, ಆರೋಗ್ಯ ಸೌಕರ್ಯ, ವಯಸ್ಕರ ಶಿಕ್ಷಣ ವಸತಿ ಸೌಕರ್ಯ, ಗುಡಿ ಕೈಗಾರಿಕೆಗಳ ಪ್ರಗತಿ, ವ್ಯವಸಾಯಕ್ಕೆ ಸಂಬಂದಿಸಿದಂತೆ ಹಣ್ಣಿನ ತೋಟದ ಬೆಳವಣಿಗೆ ಉತ್ತಮ ತಳಿಗಳು ಮತ್ತು ಗೊಬ್ಬರಗಳ ಪೂರೈಕೆ ಮೊದಲಾದವು.

**೨. ರಾಷ್ಟ್ರೀಯ ವಿಸ್ತರಣಾ ಸೇವೆ**

**ಜಾರಿಗೆ ಬಂದ ವರ್ಷ ಅಕ್ಟೋಬರ್ ೨, ೧೯೫೩**

ರಾಷ್ಟ್ರೀಯ ವಿಸ್ತರಣಾ ಸೇವೆಯು ಕಡಿಮೆ ತೀವ್ರತರದಾಗಿದ್ದು, ಸಾಪೇಕ್ಷವಾಗಿ ಕಡಿಮೆ ಅವಧಿಯಲ್ಲಿ ಇಡೀ ದೇಶವನ್ನು ವ್ಯಾಪಿಸುವ ಉದ್ದೇಶದ ಕಾರ್ಯಕ್ರಮವಾಗಿದೆ. ಸಮುದಾಯ ಅಭಿವೃದ್ಧಿ ಕಾರ್ಯಕ್ರಮ ಮತ್ತು ರಾಷ್ಟ್ರೀಯ ವಿಸ್ತರಣಾ ಸೇವೆಗಳನ್ನು ಈಗ ಒಗ್ಗೂಡಿಸಲಾಗಿದೆ.

ಕೃಷಿ ಹೈನುಗಾರಿಕೆ, ತೋಟಗಾರಿಕೆ, ಮೀನುಗಾರಿಕೆ ಮುಂತಾದ ಚಟುವಟಿಕೆಗಳಿಗೆ ಸಂಬಂಧಿಸಿದಂತೆ ಸಿಬ್ಬಂದಿಗಳು ಗ್ರಾಮೀಣ ಪ್ರದೇಶಗಳಿಗೆ ತೆರಳಿ ಜನರಿಗೆ ಅಗತ್ಯ ಮಾಹಿತಿಗಳನ್ನು ಒದಗಿಸಬೇಕೆಂಬುದು ಇದರ ಉದ್ದೇಶವಾಗಿದೆ. ಈ ಎರಡು ಕಾರ್ಯಕ್ರಮಗಳು ಈಗ ಅದೇ ಹೆಸರಿನಲ್ಲಿ ಅಸ್ತಿತ್ವದಲ್ಲಿಲ್ಲ. ಆದಾಗ್ಯೂ ಈ ಕಾರ್ಯಕ್ರಮಗಳ ಹಿನ್ನೆಲೆ ಮತ್ತು ಆಧಾರದಲ್ಲಿಯೇ ಅನೇಕ ನೂತನ ಕಾರ್ಯಕ್ರಮಗಳನ್ನು ರೂಪಿಸಿ ಜಾರಿಗೆ ತರಲಾಗಿದೆ.

**೩. ಸಮಗ್ರ ಗ್ರಾಮೀಣ ಅಭಿವೃದ್ಧಿ ಕಾರ್ಯಕ್ರಮ**

**ಜಾರಿಗೆ ಬಂದ ವರ್ಷ ೧೯೭೮ (೧೯೮೦ ರಲ್ಲಿ ಎಲ್ಲಾ ತಾಲ್ಲೂಕುಗಳಿಗೆ ವಿಸ್ತರಿಸಲಾಯಿತು)**

ಬಡತನದ ನಿವಾರಣೆಗಾಗಿ ರೂಪಿಸಲಾದ ಯೋಜನೆಯಾಗಿದೆ. ಈ ಯೋಜನೆಯಲ್ಲಿ ಪ್ರತಿ ವರ್ಷವೂ ಗ್ರಾಮೀಣ ಪ್ರದೇಶಗಳಲ್ಲಿ ಬಡತನ ರೇಖೆಗಿಂತ ಕೆಳಗಿರುವ ಪ್ರಯೋಜನದಾರರನ್ನು ಗ್ರಾಮ ಸಭೆಗಳ ಮೂಲಕ ಅಯ್ಕೆ ಮಾಡಲಾಗುತ್ತಿದೆ. ಹೀಗೆ ಆಯ್ಕೆಯಾದ ಜನರಿಗೆ ಪಶು ಸಂಗೋಪನೆ, ರೇಷ್ಮೆ ಕೃಷಿ, ಗೃಹ ಕೈಗಾರಿಕೆ ಮೊದಲಾದ ಚಟುವಟಿಕೆಗಳನ್ನು ಕೈಗೊಳ್ಳಲು ಬ್ಯಾಂಕಿನ ಸಾಲದ ಹಣ ಮತ್ತು ಸರಕಾರದ ಸಹಾಯಧನ ಎರಡನ್ನೂ ಸೇರಿಸಿ ಒಂದು ನಿರ್ದಿಷ್ಟ ಸ್ವತ್ತನ್ನು ಕೊಡಲಾಗುತ್ತದೆ.

**೪. ಜವಾಹರ ರೋಜಗಾರ ಯೋಜನೆ**

**ಜಾರಿಗೆ ಬಂದ ವರ್ಷ ಏಪ್ರಿಲ್ ೧, ೧೯೮೯**

ಏಳನೆ ಪಂಚವಾರ್ಷಿಕ ಯೋಜನೆಯ ಕೊನೆಯ ವರ್ಷದಲ್ಲಿ ಈ ಯೋಜನೆಯನ್ನು ಅನುಷ್ಠಾನಕ್ಕೆ ತರಲಾಯಿತು. ಈ ಹಿಂದೆ ಅಸ್ತಿತ್ವದಲ್ಲಿದ್ದ 'ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಕಾರ್ಯಕ್ರಮ' ಮತ್ತು 'ಗ್ರಾಮೀಣ ಭೂರಹಿತರ ಉದ್ಯೋಗ ಭರವಸೆ ಕಾರ್ಯಕ್ರಮ'ಗಳನ್ನು ಒಗ್ಗೂಡಿಸಿ ಈ ಯೋಜನೆಯನ್ನು ಜಾರಿಗೆ ತರಲಾಯಿತು. ರೋಜಗಾರ ಎಂದರೆ ಉದ್ಯೋಗ ಎಂದರ್ಥ. ನಿರುದ್ಯೋಗಿಗಳಿಗೆ

ಉದ್ಯೋಗಾವಕಾಶಗಳನ್ನು ಕಲ್ಪಿಸಿ ಅವರಿಗೆ ಜೀವನ ಸಾಮರ್ಥ್ಯವನ್ನು ಒದಗಿಸುವುದು ಈ ಯೋಜನೆಯ ಮುಖ್ಯ ಉದ್ದೇಶ.

ಬಡತನ ರೇಖೆಗಿಂತ ಕೆಳಗಿದ್ದು, ಕೆಲಸ ಮಾಡಲು ಇಚ್ಛಿಸುವಂಥ ಜನರಿಗೆ ಈ ಯೋಜನೆಯಲ್ಲಿ ಉದ್ಯೋಗವನ್ನು ನೀಡಲಾಗುತ್ತದೆ. ಉದ್ಯೋಗ ನೀಡಿಕೆಯಲ್ಲಿ ಪರಿಶಿಷ್ಠ ಜಾತಿ ಮತ್ತು ಪಂಗಡಗಳಿಗೆ ಆದ್ಯತೆ ನೀಡಬೇಕಾಗುವುದು. ಶೇ. ೩೦ ರಷ್ಟು ಉದ್ಯೋಗಾವಕಾಶಗಳು ಮಹಿಳೆಯರಿಗೆ ಮೀಸಲಿರಬೇಕೆಂಬ ನಿಯಮವಿದೆ. ಈ ಕಾರ್ಯಕ್ರಮಕ್ಕೆ ತಗಲುವ ವೆಚ್ಚದಲ್ಲಿ ಶೇ. ೮೦ ರಷ್ಟನ್ನು ಕೇಂದ್ರ ಸರಕಾರ ಮತ್ತು ಶೇ. ೨೦ರಷ್ಟನ್ನು ರಾಜ್ಯ ಸರಕಾರಗಳು ಬರಿಸುತ್ತವೆ. ಈ ಹಣವು ಜಿಲ್ಲಾ ಗ್ರಾಮೀಣ ಅಭಿವೃದ್ಧಿ ಸಂಸ್ಥೆ ಮತ್ತು ಜಿಲ್ಲಾ ಪಂಚಾಯಿತಿಗಳಿಗೆ ವಗಾಯಿಸುತ್ತದೆ. ಈ ಸಂಸ್ಥೆಗಳು ಶೇ. ೮೦ರಷ್ಟು ಹಣವನ್ನು ಮಂಡಲ ಪಂಚಾಯಿತಿಗಳಿಗೆ ವರ್ಗಾಯಿಸುತ್ತವೆ. ಜವಾಹರ ರೋಜಗಾರ ಯೋಜನೆಯ ಅನುಷ್ಠಾನದಲ್ಲಿ ಸ್ಥಳಿಯ ಪಂಚಾಯಿತಿಗಳದ್ದೇ ಪೂರ್ಣ ಹೊಣೆಯಾಗಿದೆ. ೧೯೯೮-೯೯ ರಲ್ಲಿ ಜವಾಹರ ರೋಜಗಾರ ಯೋಜನೆಯ ಅನ್ವಯ ಸುಮಾರು ೨,೮೦೦ ಕೋಟಿ ಮೊಬಲಗನ್ನು ವಿನಿಯೋಗಿಸಲಾಯಿತು. ಆ ವರ್ಷ ಈ ಯೋಜನೆಯಲ್ಲಿ ಸುಮಾರು ೪,೬೦೦ ಲಕ್ಷ ಮಾನವ ದಿನಗಳ ಉದ್ಯೋಗವನ್ನು ಸೃಷ್ಟಿಸಲಾಯಿತು.

## ೫. ಉದ್ಯೋಗ ಭರವಸೆ ಯೋಜನೆ

೧೯೮೩, ಆಗಸ್ಟ್ ೧೫ ರಂದು ಪ್ರಾರಂಭಿಸಲಾದ ಗ್ರಾಮೀಣ ಭೂರಹಿತ ಉದ್ಯೋಗ ಭರವಸೆ ಕಾರ್ಯಕ್ರಮವನ್ನು ಕೈಬಿಟ್ಟು ಅದೇ ಮಾದರಿಯಲ್ಲಿ ಈ ಯೋಜನೆಯನ್ನು ರೂಪಿಸಲಾಗಿದೆ.

ಈ ಕಾರ್ಯಕ್ರಮವನ್ನು ಕೇಂದ್ರ ಸರಕಾರವು ಸಿದ್ದಪಡಿಸುತ್ತದೆ. ಆದರೆ ಇದನ್ನು ಜಾರಿಗೊಳಿಸುವುದು ರಾಜ್ಯ ಸರಕಾರಗಳ ಮತ್ತು ಕೇಂದ್ರಾಡಳಿತ ಪ್ರದೇಶಗಳ ಜವಾಬ್ದಾರಿಯಾಗಿದೆ. ಏಳನೆಯ ಯೋಜನೆಯಲ್ಲಿ ಕೇಂದ್ರ ಸರಕಾರವು ಗ್ರಾಮೀಣ ಭೂರಹಿತರ ಉದ್ಯೋಗ ಭರವಸೆ ಕಾರ್ಯಕ್ರಮದ ಮೇಲೆ ೧,೭೪೪ಕೋಟಿ ರೂ.ಗಳನ್ನು ವಿನಿಯೋಗಿಸಿತು. ಯೋಜನೆಯ ಐದು ವರ್ಷಗಳಲ್ಲಿ ಒಟ್ಟು ೧,೦೧೩ ದಶಲಕ್ಷ ಮಾನವ ದಿನಗಳ ಉದ್ಯೋಗವನ್ನು ಸೃಷ್ಟಿಸಲಾಯಿತು. ಉದ್ಯೋಗ ಭರವಸೆಯ ಯೋಜನೆಯಲ್ಲಿ ಗ್ರಾಮೀಣ ಬಡಜನರಿಗೆ ಉದ್ಯೋಗವನ್ನು ಒದಗಿಸಲಾಗುತ್ತಿದ್ದು ಈ ಉದ್ದೇಶದಿಂದ ಶಾಲಾ ಕಟ್ಟಡ, ಅಂಗನವಾಡಿ ಕಟ್ಟಡ, ರಸ್ತೆಗಳ ಮತ್ತು ಸಮುದಾಯ ಭವನಗಳ ನಿರ್ಮಾಣ ಮುಂತಾದ ಕಾಮಗಾರಿಗಳನ್ನು ಕೈಗೊಳ್ಳಲಾಗುತ್ತಿದೆ.

**೬. ಪರಿಶಿಷ್ಟ ಜಾತಿ ಮತ್ತು ಬುಡಕಟ್ಟುಗಳ ಜನರ ಅಭಿವೃದ್ಧಿ ಕಾರ್ಯಕ್ರಮ**

ಸಮಾಜದ ದುರ್ಬಲ ವರ್ಗಗಳಲ್ಲಿ ಒಂದಾಗಿರುವ ಪರಿಶಿಷ್ಟ ಜಾತಿಗಳ ಮತ್ತು ಪರಿಶಿಷ್ಟ ಪಂಗಡಗಳ ಜನರ ಕ್ಷೇಮಾಭಿವೃದ್ಧಿಗೆ ಪಂಚವಾರ್ಷಿಕ ಯೋಜನೆಗಳಲ್ಲಿ ವಿಶೇಷ ಆಸ್ಥೆ ವಹಿಸಲಾಗಿದೆ. ಐದನೆ ಪಂಚವಾರ್ಷಿಕ ಯೋಜನೆಯಲ್ಲಿ ಬುಡಕಟ್ಟು ಉಪಯೋಜನೆಯನ್ನು, ಆರನೆಯ ಯೋಜನೆಯಲ್ಲಿ ಪರಿಶಿಷ್ಟ ಜಾತಿಗಳ ಜನರಿಗಾಗಿ ವಿಶೇಷ ಘಟಕ ಯೋಜನೆಗಳನ್ನು ಹಮ್ಮಿಕೊಳ್ಳಲಾಯಿತು. ಬುಡಕಟ್ಟು ಉಪಯೋಜನೆಯಲ್ಲಿ ಅಡಕವಾಗಿರುವ ಮೂರು ಅಂಶಗಳು:

೧. ಬುಡಕಟ್ಟು ಜನಾಂಗದವರು ಅಧಿಕ ಸಂಖ್ಯೆಯಲ್ಲಿ ವಾಸಿಸುತ್ತಿರುವ ಪ್ರದೇಶಗಳನ್ನು ಗುರುತಿಸುವಿಕೆ.
೨. ಈ ಯೋಜನೆಯನ್ನು ಕಾರ್ಯಗತಗೊಳಿಸಲು ಹಣಕಾಸನ್ನು ವಿನಿಯೋಗಿಸುವಿಕೆ.
೩. ಬುಡಕಟ್ಟು ಪ್ರದೇಶಗಳಲ್ಲಿ ಯೋಗ್ಯವಾದ ಆಡಳಿತ ರಚನೆಯ ನಿರ್ಮಾಣ ಮತ್ತು ಸೂಕ್ತವಾದ ಸಿಬ್ಬಂದಿ ನೀತಿಗಳ ಅನುಷ್ಠಾನ.

ಏಳನೆ ಯೋಜನೆಯಲ್ಲಿ ಪರಿಶಿಷ್ಟ ಜಾತಿಗಳ ಜನರ ಅಭಿವೃದ್ಧಿ ಕಾರ್ಯಕ್ರಮಗಳ ಮೇಲೆ ೬,೪೦೦ ಕೋಟಿ ರೂ. ಮತ್ತು ಪರಿಶಿಷ್ಟ ಪಂಗಡಗಳ ಜನರ ಅಭಿವೃದ್ಧಿ ಕಾರ್ಯಕ್ರಮಗಳ ಮೇಲೆ ೪,೮೦೦ ಕೋಟಿ ರೂ.ಗಳನ್ನು ವೆಚ್ಚ ಮಾಡಲಾಯಿತು. ಪರಿಶಿಷ್ಟ ಜಾತಿಯ ಜನರು ವಾಸಿಸುವ ಪ್ರದೇಶಗಳಲ್ಲಿ ಮೂಲಭೂತ ಸೌಲಭ್ಯಗಳನ್ನು ದೊರಕಿಸಿಕೊಡಲು ಮತ್ತು ಅವರ ಸಮಗ್ರ ಅಭಿವೃದ್ಧಿಯ ಬಗ್ಗೆ ಗಮನ ಹರಿಸಲು ಪರಿಶಿಷ್ಟ ಜಾತಿ ಅಭಿವೃದ್ಧಿ ನಿಗಮಗಳನ್ನು ಸ್ಥಾಪಿಸಲಾಯಿತು.

**೭. ಬರಗಾಲ ಸಂಭವನೀಯ ಪ್ರದೇಶಗಳ ಕಾರ್ಯಕ್ರಮ**

ತೀವ್ರವಾದ ಬರಗಾಲಕ್ಕೆ ಈಡಾದ ಪ್ರದೇಶಗಳಲ್ಲಿ ಶಾಶ್ವತವಾದ ಕೆಲಸಗಳನ್ನು ಕೈಗೊಂಡು ಕ್ಷಾಮ ಪರಿಹಾರಕ್ಕಾಗಿ ೧೯೭೦–೭೧ ರಲ್ಲಿ ಒಂದು ಗ್ರಾಮೀಣ ಕಾಮಗಾರಿಗಳ ಕಾರ್ಯಕ್ರಮವನ್ನು ಪ್ರಾರಂಭಿಸಲಾಯಿತು. ನಾಲ್ಕನೆಯ ಪಂಚವಾರ್ಷಿಕ ಯೋಜನೆ ಅವಧಿಯಲ್ಲಿ ಇದಕ್ಕೆ ಬರಗಾಲ ಸಂಭವನೀಯ ಪ್ರದೇಶಗಳ ಕಾರ್ಯಕ್ರಮ ಎಂದು ಪುನರ್ ನಾಮಕರಣ ಮಾಡಲಾಯಿತು. ಭೂ ಸಂಪತ್ತು ಜಲಸಂಪತ್ತು ಮತ್ತು ಮಾನವ ಸಂಪತ್ತುಗಳ ಪರಿಣಾಮಕಾರಿ ಬಳಕೆಯೊಡನೆ ಪರಿಸರ ಸಮತೋಲನವನ್ನು ಕಾಪಾಡುವುದು ಮತ್ತು ದುರ್ಬಲ ವರ್ಗಗಳ ಜನರ ಆದಾಯವನ್ನು ಅಧಿಕಗೊಳಿಸುವುದು ಇದರ ಉದ್ದೇಶವಾಗಿದೆ.

ಈ ಕಾರ್ಯಕ್ರಮಕ್ಕೆ ತಗಲುವ ಹಣಕಾಸು ವೆಚ್ಚವನ್ನು ಕೇಂದ್ರ ಮತ್ತು ರಾಜ್ಯ ಸರಕಾರಗಳು ಸಮನಾಗಿ ಧರಿಸುತ್ತವೆ. ಆರನೆಯ ಪಂಚವಾರ್ಷಿಕ ಯೋಜನೆಯಲ್ಲಿ ಇದರ ಕೆಲವು ಸಾಧನೆಯನ್ನು ಈ ಕೆಳಗೆ ನಮೂದಿಸಲಾಗಿದೆ.

| | |
|---|---|
| ೧. ಭೂಸಾರ ಮತ್ತು ತೇವ ಸಂರಕ್ಷಣೆ | ೪೨,೬೬೦೦೦ ಹೆಕ್ಟೇರುಗಳು |
| ೨. ಸಣ್ಣ ನೀರಾವರಿ ಸೃಷ್ಟಿ | ೩೨,೭೭,೦೦೦ ಹೆಕ್ಟೇರುಗಳು |
| ೩. ಅರಣ್ಯಾಭಿವೃದ್ಧಿ. | ೩೮,೭೦,೦೦೦ ಹೆಕ್ಟೇರುಗಳು |
| ೪. ಹಾಲು ಉತ್ಪಾದಕರ ಸಹಕಾರ ಸಂಘಗಳ ಸ್ಥಾಪನೆ | ೬೨೨ |
| ೫. ಉದ್ಯೋಗ ಸೃಷ್ಟಿ. | ೧೬೭ದಶಲಕ್ಷ ಮಾನವ ದಿನಗಳು |

ಏಳನೆ ಪಂಚವಾರ್ಷಿಕ ಯೋಜನೆಯಿಂದ ಈ ಕಾರ್ಯಕ್ರಮವು ಸಮಗ್ರ ಗ್ರಾಮೀಣ ಅಭಿವೃದ್ಧಿ ಕಾರ್ಯಕ್ರಮದ ಒಂದು ಭಾಗವಾಗಿ ಮುಂದುವರೆಯಿತು.

**೮. ಸ್ವಯಂ ಉದ್ಯೋಗಕ್ಕೆ ಗ್ರಾಮೀಣ ಯುವಜನರ ತರಬೇತಿ ಕಾರ್ಯಕ್ರಮ**

**ಜಾರಿಗೆ ಬಂದ ವರ್ಷ ಆಗಸ್ಟ್ ೧೯೭೯**

ಕೃಷಿ ಮತ್ತು ಅದಕ್ಕೆ ಹೊಂದಿಕೊಂಡ ಚಟುವಟಿಕೆಗಳನ್ನು ಕೈಗಾರಿಕೆ ಸೇವೆಗಳು ಮತ್ತು ಉದ್ಯಮ ಚಟುವಟಿಕೆಗಳನ್ನು ಕೈಗೊಳ್ಳಲು ಯುವಜನರಿಗೆ ತಾಂತ್ರಿಕ ಪರಿಣತಿಯನ್ನು ಒದಗಿಸುವುದು ಈ ಕಾರ್ಯಕ್ರಮದ ಉದ್ದೇಶವಾಗಿದೆ.

**೯. ಸಣ್ಣ ರೈತರ ಅಭಿವೃದ್ಧಿ ಸಂಸ್ಥೆಗಳು**

ಈ ಯೋಜನೆಯನ್ನು ಅಖಿಲ ಭಾರತ ಗ್ರಾಮೀಣ ಮತ್ತು ಪುನರ್ ಪರಿಶೀಲನಾ ಸಮಿತಿಯ (೧೯೬೯) ಶಿಫಾರಸ್ಸಿನ ಮೇರೆಗೆ ನಾಲ್ಕನೆಯ ಪಂಚವಾರ್ಷಿಕ ಯೋಜನೆಯ ಅವಧಿಯಲ್ಲಿ ಪ್ರಾರಂಭಿಸಲಾಯಿತು. ಈ ಯೋಜನೆಯು ಕೇಂದ್ರ ಸರಕಾರದ ಯೋಜನೆಯಾಗಿದೆ. ಚಿಕ್ಕ ಹಿಡುವಳಿದಾರರ ಉತ್ಪಾದನೆ ಮತ್ತು ಆದಾಯವನ್ನು ಹೆಚ್ಚಿಸುವುದೇ ಇದರ ಮುಖ್ಯ ಉದ್ದೇಶವಾಗಿದೆ. ಇವುಗಳ ವ್ಯಾಪ್ತಿಗೆ ಬರುವ ಕೃಷಿ ಅಭಿವೃದ್ಧಿ ಕಾರ್ಯಕ್ರಮಗಳೆಂದರೆ ಬಹುಬೆಳೆಯ ವಿಧಾನ, ಉತ್ತಮ ತಳಿಗಳೂ ಸೇರಿದಂತೆ

ಕೃಷಿ ಹಿಡುವಳಿಗಳ ಪೂರೈಕೆ, ತೋಟಗಾರಿಕೆ, ಸಣ್ಣ ನೀರಾವರಿಯ ಬೆಳವಣಿಗೆ, ಭೂಸಾರ, ಸಂರಕ್ಷಣೆ ಪಶುಸಂಗೋಪನೆ, ಕೋಳಿ, ಕುರಿ ಮತ್ತು ಹಂದಿಗಳ ಸಾಗಾಣಿಕೆ, ಮುಂತಾದವುಗಳು.

ಸಣ್ಣ ರೈತರ ಅಭಿವೃದ್ಧಿ ಸಂಸ್ಥೆಯ ಕಾರ್ಯಕ್ರಮವನ್ನು ಅಕ್ಟೋಬರ್ ೨, ೧೯೮೮ ರಂದು ಸಮಗ್ರ ಗ್ರಾಮೀಣ ಅಭಿವೃದ್ಧಿ ಕಾರ್ಯಕ್ರಮದೊಳಗೆ ಸೇರ್ಪಡೆ ಮಾಡಲಾಯಿತು.

**೧೦. ಅತೀ ಸಣ್ಣ (ಸೀಮಾಂತ) ರೈತರ ಮತ್ತು ಕೃಷಿ ಕಾರ್ಮಿಕರ ಸಂಸ್ಥೆ**

ಅತೀ ಸಣ್ಣ ರೈತರ ಮತ್ತು ಕೃಷಿ ಕಾರ್ಮಿಕರ ಸಂಸ್ಥೆಗಳನ್ನು ಗ್ರಾಮೀಣ ಪತ್ತು ಪುನರ್ ಪರಿಶೀಲನಾ ಸಮಿತಿಯ ಶಿಫಾರಸ್ಸಿನ ಮೇರೆಗೆ ಸಣ್ಣ ರೈತರ ಅಭಿವೃದ್ಧಿ ಸಂಸ್ಥೆಗಳೊಡನೆ ಸ್ಥಾಪಿಸಲಾಯಿತು. ಅತೀ ಸಣ್ಣ ಸಾಗುವಳಿದಾರರು ತಮ್ಮ ಚಿಕ್ಕ ಹಿಡುವಳಿಗಳನ್ನು ಗರಿಷ್ಠ ಉತ್ಪಾದಕವಾಗಿ ಬಳಸಿಕೊಳ್ಳಲು ನೆರವು ನೀಡುವುದು ಈ ಸಂಸ್ಥೆಗಳ ಗುರಿಯಾಗಿದೆ.

**೧೧. ಬರಗಾಲ ಪೀಡಿತ ಪ್ರದೇಶ ಕಾರ್ಯಕ್ರಮ**

ಬರಗಾಲ ಪೀಡಿತ ಪ್ರದೇಶಗಳ ಅಭಿವೃದ್ಧಿಗಾಗಿ ಇವು ಈ ಯೋಜನೆಯು ನೀರಾವರಿ ಸಂಪನ್ಮೂಲಗಳ ಬೆಳವಣಿಗೆ ಮತ್ತು ಆಡಳಿತ, ಭೂಸಾರ ಸಂರಕ್ಷಣೆ, ಶುಷ್ಕ ಭೂಮಿಯ ಸಾಗುವಳಿ, ಪಶುಸಂಪತ್ತಿನ ಬೆಳವಣಿಗೆ, ಅರಣ್ಯಾಭಿವೃದ್ಧಿ ಮುಂತಾದ ಕಾರ್ಯಕ್ರಮಗಳನ್ನು ಒಳಗೊಂಡಿದೆ.

**೧೨. ಗುಡ್ಡಗಾಡು ಪ್ರದೇಶಗಳ ಅಭಿವೃದ್ಧಿ ಕಾರ್ಯಕ್ರಮ**

ಉತ್ತರ ಪ್ರದೇಶ, ಅಸ್ಸಾಂ, ತಮಿಳುನಾಡು ಮತ್ತು ಪಶ್ಚಿಮ ಬಂಗಾಳಗಳಲ್ಲಿ ಗುಡ್ಡಗಾಡು ಪ್ರದೇಶಗಳ ಅಭಿವೃದ್ಧಿಗಾಗಿ ಐದನೆಯ ಪಂಚವಾರ್ಷಿಕ ಯೋಜನೆಯಲ್ಲಿ ಕೆಲವು ಕಾರ್ಯಕ್ರಮಗಳನ್ನು ಅಳವಡಿಸಲಾಯಿತು. ಅರಣ್ಯಾಭಿವೃದ್ಧಿ ತೋಟಗಾರಿಕೆ, ಭೂಸಾರ ಸಂರಕ್ಷಣೆ, ಪಶುಸಂಗೋಪನೆ, ರಸ್ತೆಗಳ ನಿರ್ಮಾಣ ಮತ್ತು ಪ್ರವಾಸೋದ್ಯಮದ ಅಭಿವೃದ್ಧಿ ಈ ಯೋಜನೆಯ ಮುಖ್ಯ ಅಂಶಗಳಾಗಿವೆ.

**೧೩. ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಕಾರ್ಯಕ್ರಮ**

೧೯೭೭-೭೮ ರಲ್ಲಿ ಕೇಂದ್ರದಲ್ಲಿ ಅಧಿಕಾರದಲ್ಲಿದ್ದ ಜನತಾ ಪಕ್ಷದ ಸರಕಾರವು 'ಕೂಲಿಗಾಗಿ ಕಾಳು' (Food for work) ಯೋಜನೆಯನ್ನು ಜಾರಿಗೆ ತಂದಿತು. ೧೯೮೦ ರ ಅಕ್ಟೋಬರ್‌ನಲ್ಲಿ ಇದನ್ನು 'ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಕಾರ್ಯಕ್ರಮ' ಎಂದು ಪುನರ್ ನಾಮಕರಣ ಮಾಡಲಾಯಿತು.

ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಕಾರ್ಯಕ್ರಮವು ಕೇಂದ್ರ ಸರಕಾರದ ಹೊಣೆಗಾರಿಕೆಯಲ್ಲಿ ಜಾರಿಗೆ ಬಂದಿರುವ ಯೋಜನೆಯಾಗಿದೆ. ಇದಕ್ಕೆ ತಗಲುವ ವೆಚ್ಚಕ್ಕೆ ಕೇಂದ್ರ ಮತ್ತು ರಾಜ್ಯ ಸರಕಾರಗಳು ಸಮನಾಗಿ ಕೊಡುಗೆ ನೀಡುತ್ತವೆ. ಏಳನೆ ಪಂಚವಾರ್ಷಿಕ ಯೋಜನೆಯ ಮೊದಲ ನಾಲ್ಕು ವರ್ಷಗಳಲ್ಲಿ ಮಾತ್ರ ಈ ಕಾರ್ಯಕ್ರಮವು ಜಾರಿಯಲ್ಲಿತ್ತು. ಈ ಅವಧಿಯಲ್ಲಿ ಈ ಕಾರ್ಯಕ್ರಮವನ್ನು ಒಂದು ಪ್ರಮುಖ ಬಡತನ ನಿವಾರಕ ತಂತ್ರವನ್ನಾಗಿ ಮುಂದುವರೆಸಲಾಯಿತು. ಬಡತನ ನಿವಾರಣೆಯ ಬಹುಮುಖ್ಯ ಕಾರ್ಯಕ್ರಮಗಳನ್ನು ಈಗ ಒಗ್ಗೂಡಿಸಿ ಪುನರ್ ರಚಿಸಲಾಗಿದೆ.

ಇವುಗಳನ್ನು ಪ್ರಮುಖವಾಗಿ ನಾಲ್ಕು ವಿಧಗಳಾಗಿ ವಿಂಗಡಿಸಬಹುದು.

- ಸ್ವಂತ ಉದ್ಯೋಗದ ಕಾರ್ಯಕ್ರಮಗಳು,
- ವೇತನ ಉದ್ಯೋಗದ ಕಾರ್ಯಕ್ರಮಗಳು.
- ರಾಷ್ಟ್ರೀಯ ಸಾಮಾಜಿಕ ನೆರವಿನ ಕಾರ್ಯಕ್ರಮಗಳು
- ಪಟ್ಟಣ ಉದ್ಯೋಗ ಮತ್ತು ಬಡತನ ನಿರೋಧಕ ಕಾರ್ಯಕ್ರಮಗಳು.

**ಸ್ವಂತ ಉದ್ಯೋಗದ ಕಾರ್ಯಕ್ರಮಗಳು** ಸ್ವಂತ ಉದ್ಯೋಗದ ಕಾರ್ಯಕ್ರಮಗಳ ವ್ಯಾಪ್ತಿಯಲ್ಲಿ ಬರುವ ಕಾರ್ಯಕ್ರಮಗಳು

**೧. ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆ**

**ಜಾರಿಗೆ ಬಂದ ವರ್ಷ ಏಪ್ರಿಲ್ ೧, ೧೯೯೯**

ರೋಜ್‌ಗಾರ್ ಎಂದರೆ ಉದ್ಯೋಗ ಎಂದರ್ಥ ಸ್ವರೋಜ್‌ಗಾರ್ ಎಂದರೆ ಸ್ವಂತ ಉದ್ಯೋಗ ಈ ಹಿಂದೆ ಜಾರಿಯಲ್ಲಿದ್ದ ಸಮಗ್ರ ಗ್ರಾಮೀಣಾಭಿವೃದ್ಧಿ ಯೋಜನೆ ಸ್ವ ಉದ್ಯೋಗಕ್ಕಾಗಿ ಗ್ರಾಮೀಣ ಯುವ ಜನರ ತರಬೇತಿ, ಗ್ರಾಮೀಣ ಭಾಗದ ಮಹಿಳೆ ಮತ್ತು ಶಿಶು ಅಭಿವೃದ್ಧಿ ಮತ್ತು ದಶಲಕ್ಷ ಭಾವಿ ಯೋಜನೆಗಳನ್ನು

ಒಗ್ಗೂಡಿಸಿ ಈ ಯೋಜನೆ ರೂಪಿಸಲಾಯಿತು. ಈ ಯೋಜನೆಯಲ್ಲಿ ಗ್ರಾಮೀಣ ಬಡಜನರಲ್ಲಿ ಅತ್ಯಂತ ದುರ್ಬಲ ವರ್ಗದವರಿಗೆ ಪರಿಶಿಷ್ಠ ಜಾತಿಯ ಮತ್ತು ಪಂಗಡದವರಿಗೆ ಮಹಿಳೆಯರಿಗೆ ಮತ್ತು ಅಂಗವಿಕಲರಿಗೆ ಹೆಚ್ಚಿನ ಆದ್ಯತೆಯನ್ನು ನೀಡಲಾಗುತ್ತದೆ ಈ ಯೋಜನೆಯ ಫಲಾನುಭವಿಗಳನ್ನು ಸ್ವರೋಜ್‌ಗಾರಿಗಳು ಎಂದು ಕರೆಯಲಾಗುತ್ತದೆ.

ವೇತನ ಉದ್ಯೋಗದ ಕಾರ್ಯಕ್ರಮಗಳು (Wage Employment Programmes) ಬಡತನ ರೇಖೆಯ ಕೆಳಗಿರುವ ಜನರಿಗೆ ಉದ್ಯೋಗವನ್ನು ಒದಗಿಸುವ ಮೂಲಕ ಅವರಿಗೆ ವೇತನವನ್ನು ಒದಗಿಸಿ ಕೊಡುವುದು ಈ ಕಾರ್ಯಕ್ರಮಗಳ ಉದ್ದೇಶವಾಗಿದೆ.

**೨. ಜವಾಹರ ಗ್ರಾಮ ಸಮೃದ್ಧಿ ಯೋಜನೆ**

ಗ್ರಾಮೀಣ ಪ್ರದೇಶಗಳಲ್ಲಿ ಮೂಲಭೂತ ಸೌಲಭ್ಯಗಳನ್ನು ಅಭಿವೃದ್ಧಿಪಡಿಸುವುದು ನಿರುದ್ಯೋಗಿಗಳಾಗಿರುವ ಬಡಜನರಿಗೆ ಪೂರಕ ಉದ್ಯೋಗಗಳನ್ನು ದೊರಕಿಸಿಕೊಡುವುದು ಈ ಕಾರ್ಯಕ್ರಮದ ಮುಖ್ಯ ಉದ್ದೇಶವಾಗಿದೆ. ಈ ಕಾರ್ಯಕ್ರಮವನ್ನು ಗ್ರಾಮ ಪಂಚಾಯಿತಿಗಳು ಅನುಷ್ಠಾನಗೊಳಿಸುತ್ತದೆ. ಗ್ರಾಮೀಣ ಬಡಜನರಿಗೆ ದೀರ್ಘಾವದಿಯಲ್ಲಿ ನಿರಂತರವಾಗಿ ಉದ್ಯೋಗಾವಕಾಶಗಳನ್ನು ಒದಗಿಸುವಂತಹ ಆಸ್ತಿಗಳನ್ನು ನಿರ್ಮಿಸುವುದು ಸಹ ಈ ಕಾರ್ಯಕ್ರಮದ ಗುರಿಯಾಗಿದೆ. ಈ ಯೋಜನೆಯನ್ನು ಕೇಂದ್ರಿಯ ಪುರಸ್ಕೃತ ಯೋಜನೆಯಾಗಿ ಜಾರಿಗೆ ತರಲಾಗಿದೆ. ಇದರ ಒಟ್ಟು ವೆಚ್ಚದಲ್ಲಿ ಶೇ. ೭೫ರಷ್ಟು ಕೇಂದ್ರ ಸರಕಾರ, ಶೇ. ೨೫ ರಷ್ಟನ್ನು ರಾಜ್ಯ ಸರಕಾರ ಭರಿಸುತ್ತವೆ. ಕೇಂದ್ರಾಡಳಿತ ಪ್ರದೇಶಗಳಲ್ಲಿ ಸಂಪೂರ್ಣ ವೆಚ್ಚವನ್ನು ಕೇಂದ್ರ ಸರಕಾರವೇ ಭರಿಸುತ್ತದೆ.

**೩. ಸಂಪೂರ್ಣ ಗ್ರಾಮೀಣ ರೋಜ್‌ಗಾರ್ ಯೋಜನೆ**

**ಜಾರಿಗೆ ಬಂದ ವರ್ಷ : ಸೆಪ್ಟಂಬರ್ ೨೪, ೨೦೦೧**

ಜವಾಹರ್ ಗ್ರಾಮ ಸಮೃದ್ಧಿ ಯೋಜನೆ ಮತ್ತು ಉದ್ಯೋಗ ಭರವಸೆ ಯೋಜನೆಗಳನ್ನು ಒಟ್ಟಿಗೆ ಸೇರಿಸಿ ರೂಪಿಸಲಾದ ಹೊಸ ಯೋಜನೆಯಾಗಿದೆ. ಈ ಕಾರ್ಯಕ್ರಮವು ಗ್ರಾಮೀಣ ಆಸ್ತಿಗಳನ್ನು ಸೃಷ್ಟಿಸುವ ಅರೆಪೌಷ್ಠಿಕತೆಯನ್ನು ನಿವಾರಿಸುವ ಮತ್ತು ಹಿಂದುಳಿದ ಹಾಗೂ ಬರಗಾಲ ಪೀಡಿತ ಪ್ರದೇಶಗಳಲ್ಲಿ ನಿರುದ್ಯೋಗ ಸಮಸ್ಯೆಯನ್ನು ಹೋಗಲಾಡಿಸುವ ಗುರಿಯನ್ನು ಹೊಂದಿದೆ.

## ೪. ರಾಷ್ಟ್ರೀಯ ಉದ್ಯೋಗ ಖಾತ್ರಿ ಯೋಜನೆ

ರಾಷ್ಟ್ರೀಯ ಸಲಹಾ ಸಮಿತಿಯ ಸಲಹೆ ಮೇರೆಗೆ ಭಾರತ ಸರಕಾರವು ಈ ಯೋಜನೆ ಜಾರಿಗೊಳಿಸಲು ೨೦೦೪ ರಲ್ಲಿ ಕಾಯ್ದೆಯನ್ನು ಅಳವಡಿಸಿತು. ಗ್ರಾಮೀಣ ಮತ್ತು ಪಟ್ಟಣದ ಬಡ ಕುಟುಂಬಗಳ ಮತ್ತು ಕೆಳ ಮಧ್ಯಮ ವರ್ಗದ ಕುಟುಂಬಗಳ ಕನಿಷ್ಠ ಒಬ್ಬರಿಗೆ ಪ್ರತಿವರ್ಷ ನೂರು ದಿನಗಳಲ್ಲಿ ಕನಿಷ್ಟ ವೇತನದಲ್ಲಿ ಸ್ವತ್ತುಗಳನ್ನು ಸೃಷ್ಟಿಸುವಂತಹ ಸಾರ್ವಜನಿಕ ಕಾಮಗಾರಿಗಳಲ್ಲಿ ಉದ್ಯೋಗಗಳನ್ನು ಒದಗಿಸುವುದು ಈ ಯೋಜನೆಯ ಗುರಿಯಾಗಿದೆ.

### ೩.೫ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಕಾಯ್ದೆಯ ವಿಕಸನ – ೨೦೦೫

ವಿಶ್ವದ ಪ್ರಸಿದ್ಧ ತತ್ವಜ್ಞಾನಿ ಜಾರ್ಜ್ ಬರ್ನಾಡ್ ಷಾ ಅವರ ಪ್ರಕಾರ "ನಿರುದ್ಯೋಗವು ಒಂದು ರಾಷ್ಟ್ರದ ಅತ್ಯಂತ ಅಪಾಯಕಾರಿ ಶತ್ರು" ಎಂಬುದು ವಾಸ್ತವಿಕ ಸತ್ಯ. ಯಾವುದೇ ರಾಷ್ಟ್ರದ ಆಡಳಿತ ಮತ್ತು ಅಭಿವೃದ್ಧಿ ಯೋಜನೆಗಳು ಉದ್ಯೋಗ ಸೃಷ್ಠಿಗೆ ಪೂರಕವಾಗಿರಬೇಕೆ ಹೊರತು ನಿರುದ್ಯೋಗಿಗಳ ಸೈನ್ಯವನ್ನು ಹೆಚ್ಚಿಸುವಂತಾಗಬಾರದು. ಜನಪ್ರಿಯ ಆಂಗ್ಲ ಗಾರ್ತಿಯೊಂದು ಹೇಳುವಂತೆ, ಇಂದು ಭಾರತದಲ್ಲಿ ಹೆಚ್ಚುತ್ತಿರುವ ಭಯೋತ್ಪಾದನೆ, ಅರಾಜಕತೆ, ಅಶಾಂತಿ, ಅಪರಾಧ ಪ್ರಕರಣಗಳಿಗೆ ಮೂಲ ಕಾರಣ ನಿರುದ್ಯೋಗ ೨೦೦೧ ರ ಜನಗಣತಿಯ ಪ್ರಕಾರ ೨೪೨ ಮಿಲಿಯನ್ ಜನರು ನಿರುದ್ಯೋಗಿಗಳಾಗಿದ್ದಾರೆ. ಅಲ್ಲದೆ ಸುಮಾರು ೧೫ ಕೋಟಿಗೂ ಅಧಿಕ ಜನರು ಅಸಂಘಟಿತ ವಲಯದಲ್ಲಿದ್ದು ಇವರು ಅಂಶಿಕ ನಿರುದ್ಯೋಗ ಹೊಂದಿದ್ದಾರೆ.

ಸ್ವಾತಂತ್ರ್ಯ ನಂತರ ದೇಶದಲ್ಲಿ ಈವರೆಗೆ ಅನೇಕ ಗ್ರಾಮೀಣ ಉದ್ಯೋಗ ಭರವಸೆ ಯೋಜನೆಗಳ ಸಾಧಕ-ಭಾದಕಗಳನ್ನು ಗಮನದಲ್ಲಿಟ್ಟುಕೊಂಡು ಕೆಲವು ಸರ್ಕಾರ "ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ" ಅಧಿನಿಯಮ ೨೦೦೫ ನ್ನು ದಿನಾಂಕ: ೭-೯-೦೫ ರಂದು ಭಾರತದ ರಾಷ್ಟ್ರ ಪತ್ರದಲ್ಲಿ ಪ್ರಕಟಿಸಲಾಯಿತು. ಪ್ರಾರಂಭದಲ್ಲಿ ದೇಶದ ೨೦೦ ಜಿಲ್ಲೆಗಳಲ್ಲಿ ಅನುಷ್ಠಾನಗೊಳಿಸಿ ಹಂತ ಹಂತವಾಗಿ ೫ ವರ್ಷಗಳ ಅವಧಿಯಲ್ಲಿ ದೇಶದ ೫೯೩ ಜಿಲ್ಲೆಗಳಿಗೆ ವಿಸ್ತರಿಸಲಾಗಿದೆ.

ಈ ಯೋಜನೆಯನ್ನು ದಿ. ೨೬-೧೧-೨೦೦೯ ರಲ್ಲಿ ಮಹಾತ್ಮಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತ್ರಿ ಯೋಜನೆ ಎಂದು ನಾಮಕಾರಣ ಮಾಡಲಾಯಿತು. ಈ ಯೋಜನೆಯನ್ನು ಮೊದಲ

ಬಾರಿಗೆ ಆಂಧ್ರಪ್ರದೇಶದ ಅನಂತಪುರ ಜಿಲ್ಲೆಯ ಬಂದಾಲ ಪಾಳ್ಯದ ಗ್ರಾಮಪಂಚಾಯಿತಿಯಲ್ಲಿ ಫೆಬ್ರವರಿ ೨೦೦೬ರಲ್ಲಿ ಅನುಷ್ಠಾನಗೊಳಿಸಲಾಯಿತು.

ಈ ಕಾಯ್ದೆಯ ರೂವಾರಿ ಬೆಲ್ಜಿಯಂ ಮೂಲದ ಖ್ಯಾತ ಅರ್ಥಶಾಸ್ತ್ರಜ್ಞ ಪ್ರೊ. ಜೀನ್ ಡ್ರೆಜ್ ಆಗಿದ್ದು ಅವರು ಪ್ರಸ್ತುತ ಡೆಲ್ಲಿ ಸ್ಕೂಲ್ ಆಫ್ ಎಕಾನಾಮಿಕ್ಸ್ ನಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ.

**ರಾಷ್ಟ್ರೀಯ ಉದ್ಯೋಗ ಖಾತ್ರಿ ಕಾಯ್ದೆ ಮತ್ತು ಯೋಜನೆ – ೨೦೦೫.**

**ಖಾತರಿಯ ವಿವರಗಳು**

೧. **ಅರ್ಹತೆ**

೧೮ ವರ್ಷಗಳಿಗೆ ಮೇಲ್ಪಟ್ಟ ವಯಸ್ಸಿನ ಹಾಗೂ ಗ್ರಾಮಾಂತರ ಪ್ರದೇಶಗಳಲ್ಲಿ ವಾಸಿಸುವಂತಹ ಯಾವ ವ್ಯಕ್ತಿಯೇ ಆಗಲಿ ಅರ್ಜಿ ಸಲ್ಲಿಸಲು ಅರ್ಹನಾಗಿರುತ್ತಾನೆ.

೨. **ಹಕ್ಕು**

ಒಂದು ಕುಟುಂಬಕ್ಕೆ ಒಂದು ವರ್ಷಕ್ಕೆ ೧೦೦ ದಿನಗಳಷ್ಟು ಉದ್ಯೋಗ ಪ್ರಾಪ್ತಿ ಎಂಬ ಮಿತಿಗೊಳಪಟ್ಟು ಒಬ್ಬ ಅಭ್ಯರ್ಥಿಯು ತಾನು ಅಪೇಕ್ಷಿಸಿದಷ್ಟು ದಿನಗಳ ಉದ್ಯೋಗಕ್ಕೆಂದು ಅರ್ಜಿ ಸಲ್ಲಿಸಿದ ಹದಿನೈದು ದಿನಗಳೊಳಗಾಗಿ ಕೆಲಸಕ್ಕೆ ಅರ್ಹನಾಗುತ್ತಾನೆ.

೩. **ದೂರ**

ಸಾಧ್ಯವಾದಷ್ಟು ಮಟ್ಟಿಗೆ ಅಭ್ಯರ್ಥಿಯ ಮನೆಯಿಂದ ೫ ಕಿಲೋ ಮೀಟರ್‌ಗಳಷ್ಟು ವ್ಯಾಪ್ತಿಯೊಳಗೆ ಕೆಲಸವನ್ನು ಒದಗಿಸತಕ್ಕದ್ದು. ಏನೇ ಆದರೂ ಅದೇ ಬ್ಲಾಕ್‌ನೊಳಗೇ ಕೆಲಸವನ್ನು ಒದಗಿಸಿಕೊಡಬೇಕು. ಒಂದು ವೇಳೆ ೫ ಕಿ.ಮೀ.ಗಳಿಗಿಂತ ದೂರದ ಸ್ಥಳದಲ್ಲಿ ಕೆಲಸವನ್ನು ಒದಗಿಸಿದ್ದರೆ ಆಗ ಪ್ರಯಾಣ ಭತ್ಯೆಯನ್ನು ಪಾವತಿ ಮಾಡಬೇಕಾಗುತ್ತದೆ.

೪ **ವೇತನಗಳು**

ಕೇಂದ್ರ ಸರ್ಕಾರವು ಬೇರೊಂದು ವೇತನ ದರವನ್ನು "ಪ್ರಕಟಿಸದ" ಹೊರತು ಒಂದು ರಾಜ್ಯದಲ್ಲಿ ಚಾಲ್ತಿಯಲ್ಲಿರುವ ಕೃಷಿ ಕೆಲಸಗಾರರಿಗೆ ಅನ್ವಯವಾಗುವಂತಹ ಕಾಯಿದೆ ಬದ್ಧವಾಗಿ

ನಿಗದಿ ಮಾಡಿದ ಕನಿಷ್ಠ ವೇತನಗಳನ್ನು ಪಡೆಯಲು ಈ ಕಾಯಿದೆಯಡಿ ಕೆಲಸ ಮಾಡುವ ವ್ಯಕ್ತಿಗಳು ಅರ್ಹರಾಗಿರುತ್ತಾರೆ. ಕೇಂದ್ರ ಸರ್ಕಾರವು ಪ್ರಕಟಪಡಿಸಿದ್ದಲ್ಲಿ ವೇತನ ದರವು ಕನಿಷ್ಠ ಪಕ್ಷ ದಿನಕ್ಕೆ ೧೦೦ ರೂಪಾಯಿಗಳಷ್ಟಿರುವುದು.

**೫. ಸಕಾಲಿಕ ಪಾವತಿ**

ಕೆಲಸಗಾರರಿಗೆ ವಾರಕ್ಕೊಮ್ಮೆ ವೇತನ ಪಾವತಿ ಮಾಡಬೇಕಾಗುತ್ತದೆ. ಅಥವಾ ಏನೇ ಆಗಲಿ ಹದಿನೈದು ದಿನಗಳಿಗೆ ಮೀರದ ಅವಧಿಯೊಳಗಾಗಿ ಪಾವತಿ ಮಾಡಲೇಬೇಕಾಗುತ್ತದೆ. ಮೊದಲೇ ಪ್ರಕಟಿಸಿದ ದಿನಾಂಕಗಳಂದು ಸಮುದಾಯದ ನಿಷ್ಪಕ್ಷಪಾತ ವ್ಯಕ್ತಿಗಳ ಸಮ್ಮುಖದಲ್ಲಿ ಸಂಬಂಧಪಟ್ಟ ವ್ಯಕ್ತಿಗೆ ನೇರವಾಗಿ ವೇತನಗಳ ಪಾವತಿ ಮಾಡಬೇಕಾಗುತ್ತದೆ.

**೬. ನಿರುದ್ಯೋಗ ಭತ್ಯೆ**

೧೫ ದಿನಗಳೊಳಗಾಗಿ ಕೆಲಸವನ್ನು ಒದಗಿಸದಿದ್ದ ಪಕ್ಷದಲ್ಲಿ ಅಭ್ಯರ್ಥಿಗಳು ನಿರುದ್ಯೋಗ ಭತ್ಯೆಯೊಂದನ್ನು ಪಡೆಯಲು ಅರ್ಹರಾಗುವುದು, ಮೊದಲನೆಯ ಮೂವತ್ತು ದಿನಗಳವರೆಗೂ ವೇತನ ದರದಲ್ಲಿನ ನಾಲ್ಕನೆಯ ಒಂದರಷ್ಟು ಅನಂತರ ಅರ್ಧಭಾಗದಷ್ಟು ಎಂದು ನಿರುದ್ಯೋಗ ಭತ್ಯೆಯನ್ನು ನಿಗದಿಪಡಿಸಲಾಗಿದೆ.

**ರಾಷ್ಟ್ರೀಯ ಉದ್ಯೋಗ ಖಾತ್ರಿ ಕಾಯ್ದೆಯ ಪ್ರಮುಖವಾದ ಅಂಶಗಳು**

**೧. ಉದ್ಯೋಗ ಖಾತರಿ ಅಧಿನಿಯಮದ ಮೂಲ ಕಲ್ಪನೆ**

ಈ ಅಧಿನಿಯಮಾನುಸಾರ ನಿಗದಿಪಡಿಸಿದ ಕನಿಷ್ಠ ವೇತನದ ಮೇಲೆ ಸಾಂದರ್ಭಿಕವಾಗಿ ಲಭಿಸುವ ದೈಹಿಕ ಶ್ರಮದ ಕೆಲಸವನ್ನು ಮಾಡಲು ಒಪ್ಪಿಕೊಳ್ಳುವ ವ್ಯಕ್ತಿಗೆ ಉದ್ಯೋಗದ ಖಾತರಿಯನ್ನು ನೀಡುವುದು ಇದರ ಕಲ್ಪನೆಯಾಗಿದೆ. ಈ ಅಧಿನಿಯಮದಡಿಯಲ್ಲಿ ಕೆಲಸವನ್ನು ಅಪೇಕ್ಷಿಸಿ ಅರ್ಜಿ ಸಲ್ಲಿಸುವ ಯಾರೇ ವಯಸ್ಕನಿಗೆ ಲೋಕೋಪಯೋಗಿ ಕೆಲಸಗಳಲ್ಲಿ ಕೂಡಲೇ ಉದ್ಯೋಗ ಪಡೆಯುವ ಹಕ್ಕಿರುತ್ತದೆ. ಈ ರೀತಿಯಾಗಿ ಉದ್ಯೋಗ ಖಾತರಿ ಕಾಯಿದೆಯು ಅತ್ಯಂತ ಮೂಲ ಸ್ವರೂಪದ ಉದ್ಯೋಗವನ್ನು ಒದಗಿಸಿಕೊಡಲು ಒಂದು ಸಾರ್ವತ್ರಿಕ ಹಾಗೂ ಅನುಷ್ಠಾನಕ್ಕೆ ತರಬಹುದಾದಂತಹ ಕಾನೂನುಬದ್ಧವಾದ

ಹಕ್ಕನ್ನು ನೀಡುತ್ತದೆ. ಗೌರವಯುತ ಬಾಳ್ವೆಯ ಮೂಲಭೂತ ಹಕ್ಕಿನ ಒಂದು ಅಂಗವಾಗಿ ಉದ್ಯೋಗದ ಅಧಿಕಾರವನ್ನು ಕಾನೂನುಬದ್ಧವಾಗಿ ಜಾರಿಗೆ ತರುವಲ್ಲಿ ಇದೊಂದು ಹೆಜ್ಜೆಯಾಗಿದೆ.

**೨. ಮೂಲೋದ್ದೇಶಗಳ ಸಾಧನೆ**

ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಕಾಯಿದೆಯು ಒಂದು ರೀತಿಯಲ್ಲಿ "ಅರೆ ಮನಸ್ಸಿನ" ಉದ್ಯೋಗ ಖಾತರಿ ಕಾನೂನಾಗಿದೆ. ಈ ಅಧಿನಿಯಮದ ರೀತ್ಯ ಯಾವ ವಯಸ್ಕನೇ ಆಗಲಿ ಕೆಲಸಕ್ಕೆಂದು ಅರ್ಜಿ ಸಲ್ಲಿಸಿದ ೧೫ ದಿನಗಳೊಳಗಾಗಿ ಲೋಕೋಪಯೋಗಿ ಕೆಲಸದಲ್ಲಿ ಉದ್ಯೋಗ ಪಡೆಯುವ ಹಕ್ಕು ದೊರೆಯುತ್ತದೆ. ಆದಾಗ್ಯೂ ಈ ಹಕ್ಕು ಕೆಲವೊಂದು ಇತಿಮಿತಿಗಳಿಗೆ ಒಳಪಟ್ಟಿರುತ್ತದೆ. ಉದಾಹರಣೆಗೆ, ಉದ್ಯೋಗ ಖಾತರಿ ಕೇವಲ ಗ್ರಾಮೀಣ ಪ್ರದೇಶಗಳಿಗೆ ಮಾತ್ರ ಸೀಮಿತಿ ಅಲ್ಲದೆ ಇದು "ವರ್ಷಂಪ್ರತಿ ಕುಟುಂಬವೊಂದಕ್ಕೆ ೧೦೦ ದಿನಗಳು ಮಾತ್ರ" ಎಂದು ಸೀಮಿತಗೊಂಡಿದೆ.

**೩. ದೊರೆಯ ಬಹುದಾದ ಅನುಕೂಲಗಳು**

೧. *ಒಂದು ಪರಿಣಾಮಕಾರಿಯಾದ ಉದ್ಯೋಗ ಖಾತರಿ ಕಾಯಿದೆ ಗ್ರಾಮೀಣ ಕುಟುಂಬಗಳನ್ನು ಬಡತನ ಹಾಗೂ ಹಸಿವಿನಿಂದ ರಕ್ಷಿಸಲು ನೆರವಾಗುತ್ತದೆ. ಕನಿಷ್ಠ ವೇತನದ ಆಧಾರದ ಮೇಲೆ ೧೦೦ ದಿನಗಳಷ್ಟು ಉದ್ಯೋಗ ಖಾತರಿಯು ಅಷ್ಟಾಗಿ ಹೇಳಿಕೊಳ್ಳುವಂತಹ ವಿಶೇಷ ಸವಲತ್ತೇನೂ ಅಲ್ಲ. ಒಂದು ಹೊತ್ತಿನ ಹಿಟ್ಟಿಗಾಗಿ ಪರಿತಪಿಸುತ್ತಿರುವಂತಹ ಜನರ ಮಟ್ಟಿಗೆ ಹೇಳುವುದಾದರೆ ಇದೊಂದು ವಿಶೇಷ ಸಂಗತಿಯೇ ಸರಿ.*

೨. *ಜನರು ಗ್ರಾಮೀಣ ಪ್ರದೇಶಗಳಿಂದ ನಗರ ಪ್ರದೇಶಗಳಿಗೆ ವಲಸೆ ಹೋಗುವುದನ್ನು ಈ ಕಾನೂನು ಬಹುಮಟ್ಟಿಗೆ ಕಡಿಮೆ ಮಾಡುವ ಸಂಭವವಿದೆ. ಗ್ರಾಮದಲ್ಲಿಯೇ ಸಾಕಷ್ಟು ಉದ್ಯೋಗಾವಕಾಶಗಳು ಇದ್ದ ಪಕ್ಷದಲ್ಲಿ, ಅನೇಕ ಕುಟುಂಬಗಳು ನಗರಗಳ ಕಡೆ ಹೋಗುವುದರ ಬದಲು ಗ್ರಾಮಗಳಲ್ಲಿಯೇ ಉಳಿಯುತ್ತವೆ.*

೩. *ಉದ್ಯೋಗ ಖಾತರಿಯು ಮಹಿಳೆಯರ ಸಬಲೀಕರಣಕ್ಕೆ ಒಂದು ಪ್ರಮುಖ ಸಂಪನ್ಮೂಲವಾಗುತ್ತದೆ. ಹಿಂದಿನ ಅನುಭವದ ಆಧಾರದ ಮೇಲೆ ಈ ಕಾಯಿದೆಯ ಅಡಿಯಲ್ಲಿ ಉದ್ಯೋಗ ಪಡೆಯುವ ಶ್ರಮಿಕರಲ್ಲಿ ಬಹುಪಾಲು ಮಹಿಳೆಯರೇ ಇರುವ ಸಂಭವವಿದೆ. ಅಲ್ಲದೆ ಉದ್ಯೋಗದ*

ಖಾತರಿಯನ್ನು ನೀಡುವುದರಿಂದಾಗಿ ಅವರಿಗೆ ಒಂದಿಷ್ಟು ಆರ್ಥಿಕ ಸ್ವಾತಂತ್ರ್ಯವೂ ಪ್ರಾಪ್ತವಾಗುವುದು.

೪. ಗ್ರಾಮೀಣ ಪ್ರದೇಶಗಳನ್ನು ಉಪಯುಕ್ತ ಸ್ವತ್ತನ್ನು ಸೃಷ್ಟಿಸಲು ಉದ್ಯೋಗ ಖಾತರಿ ಕಾಯಿದೆಯ ಒಂದು ಸದಾವಕಾಶವನ್ನು ಕಲ್ಪಿಸುತ್ತದೆ. ಇದಕ್ಕೆ ಒಂದು ಉದಾಹರಣೆಯೆಂದರೆ, ಮಳೆ ಹೊಯ್ಲಿನಿಂದ ಮಳೆ ನೀರಿನ್ನು ಉಪಯೋಗಾರ್ಹವಾಗಿ ಸಂಗ್ರಹಿಸಿಡುವ ತೊಟ್ಟಿ ಮುತಾದವನ್ನು ನಿರ್ಮಿಸುವಾಗ ಪರಿಶ್ರಮ ಪೂರ್ವಕವಾದ ವಿಧಾನಗಳು ಅಗತ್ಯ. ಆಗ ಶ್ರಮಿಕರ ಅಗತ್ಯವಿರುತ್ತದೆ.

೫. ಖಾತರಿ ಉದ್ಯೋಗ ಕಲ್ಪನೆ ಗ್ರಾಮೀಣ ಸಮಾಜದಲ್ಲಿ ಸಮಾನತೆಯ ಬದಲಾವಣೆಯನ್ನು ತರುವ ಹಾಗೂ ಸಾಮಾಜಿಕ ವ್ಯವಸ್ಥೆಯಲ್ಲಿ ಪಕ್ಷಪಾತವಿಲ್ಲದ ಸಮಾನತೆಯನ್ನು ತರುವ ಸಂಭವವಿದೆ.

೬. ಉದ್ಯೋಗ ಖಾತರಿ ಕಾಯಿದೆಯ ಅಸಂಘಟಿತ ಕೆಲಸಗಾರರ ಹಕ್ಕನ್ನು ರಕ್ಷಿಸುವ ಒಂದು ಸಾಧನವಾಗುತ್ತದೆ. ಅವರು ಕನಿಷ್ಠ ವೇತನ ಮತ್ತು ಸಾಮಾಜಿಕ ಸುರಕ್ಷತೆ ಮುಂತಾದ ಇತರ ಮುಖ್ಯವಾದ ಹಕ್ಕುಗಳನ್ನು ಪಡೆದುಕೊಳ್ಳುವ ಬಗ್ಗೆ ಹೋರಾಟ ನಡೆಸಲು ಈ ಕಾಯಿದೆಯಿಂದ ಸಾಧ್ಯವಾಗುತ್ತದೆ. ಈ ಕಾಯಿದೆಯನ್ನು ಪರಿಣಾಮಕಾರಿಯಾಗಿ ಜಾರಿಗೆ ತರುವಲ್ಲಿ ಜನಶಕ್ತಿಯನ್ನು ಸಜ್ಜುಗೊಳಿಸುವ ಕೆಲಸಕ್ಕೆ ಹೆಚ್ಚು ಬೆಲೆ ಇರುತ್ತದೆ. ಹೆಚ್ಚು ಉಪಯುಕ್ತತೆ ಇರುತ್ತದೆ. "ಅಸಂಘಟಿತ ಕೆಲಸಗಾರರು" ಸಂಘಟನೆಗೊಳ್ಳಲು ಇದೊಂದು ವಿಶಿಷ್ಟ ರೀತಿಯ ಅವಕಾಶವಾಗಿದೆ. ಇದು ಭಾರತದ ಹೆಚ್ಚು ಭಾಗಗಳಲ್ಲಿ ಕಾರ್ಮಿಕ ಚಳುವಳಿಗೆ ಹೋದಾಗಿ ಜೀವದಾನ ನೀಡಬಹುದು.

**೪. ಉದ್ಯೋಗ ಖಾತರಿ ಕಾಯಿದೆಯ ಅಡಿಯಲ್ಲಿ ಕೆಲಸ ಮಾಡಲು ಅರ್ಹರಾದವರು**

ಉದ್ಯೋಗ ಖಾತರಿಯು "ಸಾರ್ವತ್ರಿಕ" ಸ್ವರೂಪದ ಒಂದು ಹಕ್ಕು. ಯಾವ ವಯಸ್ಕನೇ ಆಗಲಿ ಈ ಬಗ್ಗೆ ಅರ್ಜಿ ಸಲ್ಲಿಸಬಹುದು. ಸ್ವಯಂ ಆಯ್ಕೆಯ ತತ್ವವನ್ನು ಈ ಕಾನೂನು ಆಧರಿಸಿದೆ. ಅಂದರೆ ಯಾರೇ ಆಗಲಿ ಕನಿಷ್ಠ ವೇತನದ ಮೇಲೆ ಕೌಶಲ್ಯ ಅಗತ್ಯವಿಲ್ಲದಂತಹ ಕೆಲಸವನ್ನು ಮಾಡಲು ಸಮ್ಮತಿಸುವರೋ ಅಂತಹವರಿಗೆ ಸಾರ್ವಜನಿಕ ಬೆಂಬಲದ ಅಗತ್ಯವಿದೆ ಎಂದೇ ಪರಿಗಣಿಸಲಾಗುವುದು. ಅಲ್ಲದೆ ಅಂತಹವರಿಗೆ ಅವರು ಕೇಳಿದಾಗ ಉದ್ಯೋಗವನ್ನು ಒದಗಿಸತಕ್ಕದ್ದು.

**೫. ಪ್ರತಿ ವರ್ಷ ಇಂತಿಷ್ಟೇ ದಿನಗಳಿಗೆ ಮಾತ್ರವೇ ಉದ್ಯೋಗ ಖಾತರಿ ಮಿತಿ**

ಉದ್ಯೋಗ ಖಾತರಿಯು "ಪ್ರತಿ ವರ್ಷ ಒಂದು ಕುಟುಂಬಕ್ಕೆ ೧೦೦ ದಿನಗಳು" ಎಂಬ ಮಿತಿಗೆ ನಿಗದಿಯಾಗಿದೆ. ಇಲ್ಲಿ ಒಂದು ಅಂಶವನ್ನು ಗಮನಿಸಬೇಕು. "ವರ್ಷ" ಎಂದರೆ "ಹಣಕಾಸು ವರ್ಷ" ಎಂದೇ ತಿಳಿಯಬೇಕು. ಈ ಹಣಕಾಸು ವರ್ಷವು ಏಪ್ರಿಲ್ ೧ ರಂದು ಆರಂಭವಾಗುವುದು.

ಇದನ್ನೇ ಬೇರೆ ಮಾತುಗಳಲ್ಲಿ ಹೇಳುವುದಾದರೆ, ಏಪ್ರಿಲ್ ೧ ರಂದು ಪ್ರತಿಯೊಂದು ಕುಟುಂಬವೂ ಮುಂದಿನ ಹನ್ನೆರಡು ತಿಂಗಳುಗಳಿಗೆ ೧೦೦ ದಿನಗಳ ಉದ್ಯೋಗವನ್ನು ಖಾತರಿಯಾಗಿ ಪಡೆಯಬಹುದಾಗಿದೆ. ಒಂದು ಕುಟುಂಬದ ವಯಸ್ಕ ಸದಸ್ಯರು ಹಂಚಿಕೊಳ್ಳಬಹುದು. ಅದೇ ಕುಟುಂಬಕ್ಕೆ ಸೇರಿದ ಬೇರೆ ಬೇರೆ ವ್ಯಕ್ತಿಗಳು ಬೇರೆ ಬೇರೆ ದಿನಗಳಲ್ಲಿ ಕೆಲಸ ಮಾಡಬಹುದು. ಆದರೆ ಅವರೆಲ್ಲರೂ ಸೇರಿ ಮಾಡಿದ ಕೆಲಸದ ದಿನಗಳು ಮಾತ್ರ ಒಂದು ಹಣಕಾಸು ವರ್ಷದಲ್ಲಿ ೧೦೦ ದಿನಗಳಲ್ಲಿ ಮೀರುವಂತಿಲ್ಲ.

**೬. ಉದ್ಯೋಗ ಖಾತರಿ ಕಾಯಿದೆ ಮತ್ತು "ಉದ್ಯೋಗ ಖಾತರಿ ಯೋಜನೆ" (ಸ್ಕೀಂ) ಇವೆರಡರ ನಡುವೆ ಏನಾದರೂ ಸಂಬಂಧ**

ಉದ್ಯೋಗ ಖಾತರಿಯನ್ನು ಕಾರ್ಯರೂಪಕ್ಕೆ ತರುವ ಸಲುವಾಗಿ ಆರು ತಿಂಗಳುಗಳೊಳಗಾಗಿ ಗ್ರಾಮೀಣ ಉದ್ಯೋಗ ಯೋಜನೆ (ಸ್ಕೀಂ) ಯೊಂದನ್ನು ಸಿದ್ಧಪಡಿಸುವಂತೆ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಅಧಿನಿಯಮ ೨೦೦೫ ಪ್ರತಿಯೊಂದು ರಾಜ್ಯಕ್ಕೂ ಆದೇಶಿಸುತ್ತದೆ. ಈ ರೀತಿಯಾಗಿ ಈ ಕಾಯಿದೆ ಉದ್ಯೋಗ ಖಾತರಿಗೊಂದು ಶಾಸನಬದ್ಧವಾದ ಬುನಾದಿಯನ್ನು ನೀಡುತ್ತದೆ. ಮತ್ತು ಉದ್ಯೋಗ ಖಾತರಿ ಕಾಯಿದೆಯನ್ನು ಜಾರಿಗೆ ತರಲು ಈ ಯೋಜನೆಯು ಒಂದು ಸಾಧನವಾಗಿ ಪರಿಮಿಸುತ್ತದೆ. ಇಲ್ಲಿ ಒಂದು ಅಂಶವನ್ನು ಗಮನಿಸಬಹುದು. ಕಾಯಿದೆ ಒಂದು ರಾಷ್ಟ್ರೀಯ ಶಾಸನ. ಆದರೆ ಯೋಜನೆ ರಾಜ್ಯಕ್ಕೆ ಮಾತ್ರ ನಿರ್ದಿಷ್ಟಗೊಂಡಿರುತ್ತದೆ.

ಪ್ರತಿಯೊಂದು ರಾಜ್ಯವೂ ತನ್ನದೇ ಆದ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯನ್ನು ರೂಪಿಸಿಕೊಳ್ಳುವ ಸ್ವಾತಂತ್ರ್ಯವನ್ನು ಪಡೆದಿರುತ್ತದೆ. ಆದರೆ ೨೦೦೫ ರ ಅಧಿನಿಯಮದ ಅನುಸೂಚಿ–೧ರಲ್ಲಿ ವಿವರಿಸಿರುವ ಕೆಲವೊಂದು ಮೂಲ ಸ್ವರೂಪಗಳಿಗೆ ಈ ಯೋಜನೆಯು ಒಳಪಟ್ಟಿರುತ್ತದೆ. ಉದಾಹರಣೆಗೆ, ಅನುಸೂಚಿ–೧ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ ಪ್ರಕಾರ ಕೈಗೊಳ್ಳಬಹುದಾದ ಲೋಕೋಪಯೋಗಿ ಕೆಲಸಗಳ ಮಾದರಿಯನ್ನು ಹಾಗೂ ಈ ಲೋಕೋಪಯೋಗಿ ಕೆಲಸವು

ಅನುಷ್ಠಾನದಲ್ಲಿರುವ ಸ್ಥಳದಲ್ಲಿ ಒದಗಿಸಬೇಕಾದ ಕನಿಷ್ಠ ಸೌಕರ್ಯಗಳನ್ನು ನಿರ್ದಿಷ್ಟವಾಗಿ ತಿಳಿಸುತ್ತದೆ. ಪ್ರತಿಯೊಂದು ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯೂ, ೨೦೦೬ನೆಯ ಜನವರಿ ತಿಂಗಳಲ್ಲಿ ಗ್ರಾಮೀಣ ಅಭಿವೃದ್ಧಿ ಸಚಿವಾಲಯವು ಹೊರಡಿಸಿದ ಕಾರ್ಯಾತ್ಮಕ ಮಾರ್ಗದರ್ಶಿ ಸೂಚನೆಗಳನ್ನು ಸಹ ಆಚರಣೆಗೆ ತರಬೇಕಾಗುತ್ತದೆ.

**೭. ಕಾನೂನಿನಲ್ಲಿ ಒಂದು "ಕುಟುಂಬದ ಪರಿಭಾಷೆ"**

ಕಾನೂನು ಒಂದು ಕುಟುಂಬವನ್ನು ಈ ರೀತಿ ಸ್ಪಷ್ಟಡಿಸಿದೆ. "ಒಂದು ಕುಟುಂಬದ ಸದಸ್ಯರು ರಕ್ತ ಸಂಬಂಧಿಗಳಾಗಿರುವರು. ವಿವಾಹ ಅಥವಾ ದತ್ತು ಸ್ವೀಕಾರದ ಪ್ರಕಾರ ಪರಸ್ಪರ ಸಂಬಂಧಿಗಳಾಗಿರುವರು. ಸಾಮಾನ್ಯವಾಗಿ ಒಟ್ಟಿಗೆ ವಾಸಿಸುವರು. ಎಲ್ಲರೂ ಭೋಜನದಲ್ಲಿ ಪಾಲ್ಗೊಳ್ಳುವರು. ಇಲ್ಲವೇ ಇಡೀ ಕುಟುಂಬವೊಂದೇ ಒಂದು ಸಾರ್ವತ್ರಿಕ ರೇಷನ್ ಕಾರ್ಡ್ (ಪಡಿತರ ಚೀಟಿ) ಯನ್ನು ಹೊಂದಿರುವುದು" ಪ್ರಕರಣ ೨ (ಎಫ್), ಈ ವಿವರಣೆಯ ಒಂದು ಸಮಸ್ಯೆ ಎಂದರೆ, ಅವಿಭಕ್ತ ಕುಟುಂಬದ ಸದಸ್ಯರು ಒಟ್ಟಿಗೆ ವಾಸಿಸುತ್ತಿದ್ದ, ಒಂದೇ ರೇಷನ್ ಕಾರ್ಡ್‌ನ ಸೌಲಭ್ಯಗಳನ್ನು ಬಳಸುತ್ತಿದ್ದು ಅ ಕುಟುಂಬವು ಎಷ್ಟೇ ದೊಡ್ಡದಾಗಿರಲಿ ಅದನ್ನು ಒಂದೇ ಕುಟುಂಬವೆಂದು ಪರಿಗಣಿಸುವುದು. ಇದು ದೊಡ್ಡ ದೊಡ್ಡ ಕುಟುಂಬಗಳ ವಿಚಾರದಲ್ಲಿ ನ್ಯಾಯ ಸಮ್ಮತವಲ್ಲ. ಏಕೆಂದರೆ ಈ ದೊಡ್ಡ ಕುಟುಂಬಗಳು ತಮ್ಮ ಅಗತ್ಯಗಳು ಎಷ್ಟೇ ಹೆಚ್ಚಾಗಿದ್ದಾಗ್ಯೂ ಸಹ ಚಿಕ್ಕ ಕುಟುಂಬಗಳಂತೆಯೇ ವರ್ಷಂಪ್ರತಿ ಅದೆ ೧೦೦ ದಿನಗಳಷ್ಟು ಮಾತ್ರ ಉದ್ಯೋಗದ ಅರ್ಹತೆ ಪಡೆದಿರುತ್ತವೆ.

**೮.** ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯಡಿಯಲ್ಲಿ ಕಾರ್ಮಿಕರಿಗೆ ನೀಡುವ ವೇತನ ಪಾವತಿ ಕೇಂದ್ರ ಸರ್ಕಾರವು ಬೇರೊಂದು ವೇತನ ದರವನ್ನು ಪ್ರಕಟಪಡಿಸುವ ಇದ್ದ ಪಕ್ಷದಲ್ಲಿ ರಾಜ್ಯದಲ್ಲಿ ಕೆಲಸ ಮಾಡುವ ಕೃಷಿ ಕೆಲಸಗಾರರಿಗೆ ನೀಡುವ ಕಾಯಿದೆ ಬದ್ಧವಾದ ಕನಿಷ್ಠ ವೇತನವನ್ನು ಪಡೆಯಲು ಕಾರ್ಮಿಕರು ಅರ್ಹರಾಗಿರುತ್ತರೆ. ಕೇಂದ್ರ ಸರ್ಕಾರವು ವೇತನದರವೊಂದನ್ನು ಪ್ರಕಟಪಡಿಸಿದ್ದಲ್ಲಿ, ಅದು ದಿನವೊಂದಕ್ಕೆ ಕನಿಷ್ಠ ೧೦೦ ರೂಪಾಯಿಗಳಷ್ಟಿರುತ್ತದೆ.

**೯. ಈ ವೇತನವು ಯಾವ ರೀತಿಯಲ್ಲಿ ಬಟವಾಡೆಯಾಗುತ್ತದೆ ದಿನಗೂಲಿಯೇ ಅಥವಾ ಕೆಲಸಕ್ಕೆ ತಕ್ಕ ಕಿಮ್ಮತ್ತಿನ ರೂಪದಲ್ಲಿದೆಯೇ?**

ಕಾನೂನಿನ ಪ್ರಕಾರ ಎರಡೂ ವಿಧಾನಗಳಿಗೆ ಅವಕಾಶವಿದೆ. ಕನಿಷ್ಠ ವೇತನವೇ ಈ ಎರಡೂ ವಿಧಾನಗಳಿಗೂ ಅನ್ವಯ. ಕೆಲಸಕ್ಕೆ ತಕ್ಕ ಕಿಮ್ಮತ್ತು ಆಧಾರದ ಮೇಲೆ ಪಾವತಿ ಮಾಡುವ ವೇತನವು ಸಾಮಾನ್ಯವಾಗಿ ಒಬ್ಬ ವ್ಯಕ್ತಿಯು ಏಳು ಗಂಟೆಗಳಷ್ಟು ಕಾಲ ಕೆಲಸ ಮಾಡಿದಕ್ಕೆ ಪಡೆಯುವ ವೇತನದಷ್ಟೇ ಇರುತ್ತದೆ.

**೧೦. ವೇತನದ ಪಾವತಿಯ ರೂಪ**

ವೇತನವನ್ನು ನಗದು ರೂಪದಲ್ಲಿ ಇಲ್ಲವೆ ವಸ್ತುಗಳ ರೂಪದಲ್ಲಿ ಅಥವಾ ನಗದು ಮತ್ತು ವಸ್ತುಗಳ ರೂಪದಲ್ಲಿ ಪಾವತಿ ಮಾಡಬಹುದು. ಸಾಮಾನ್ಯವಾಗಿ ವಸ್ತುವಿನ ರೂಪದಲ್ಲಿ ಪಾವತಿ ಎಂದರೆ, ವೇತನದಲ್ಲಿ ಒಂದು ಪಾಲನ್ನು ಆಹಾರ ಧಾನ್ಯಗಳ ರೂಪದಲ್ಲಿ ಕೊಡುವುದು ಎಂದು ಅರ್ಥ. ಒಟ್ಟು ವೇತನದಲ್ಲಿ ಕನಿಷ್ಠ ಪಕ್ಷ ಶೇ.೨೫ರಷ್ಟು ನಗದು ರೂಪದಲ್ಲಿ ಇರತಕ್ಕದ್ದು.

**೧೧. ವೇತನ ಸಂದಾಯ**

ವೇತನಗಳು ಪ್ರತಿ ವಾರವೂ ಪಾವತಿಯಾಗತಕ್ಕದ್ದು. ಇಲ್ಲವೇ "ಅಂತಹ ಕೆಲಸವನ್ನು ಪೂರೈಸಿದ ದಿನಾಂಕದಿಂದ ೧೫ ದಿನಗಳಿಗೆ ಮೀರದ ಅವಧಿಯಲ್ಲಿ" ಪಾವತಿಯಾಗತಕ್ಕದ್ದು. ವೇತನಗಳಲ್ಲಿ ಒಂದು ಗೊತ್ತಾದ ಪಾಲನ್ನು ದಿನಗೂಲಿಯ ಆಧಾರದ ಮೇಲೆ ನಗದು ರೂಪದಲ್ಲಿ ಕೊಡತಕ್ಕದ್ದು ಎಂದು ರಾಜ್ಯ ಸರ್ಕಾರವು ನಿಗದಿಪಡಿಸಬಹುದು.

**೧೨. ಒಂದು ವೇಳೆ ವೇತನವನ್ನು ನಿಗದಿತ ಸಮಯದಲ್ಲಿ ಮಾಡದಿದ್ದಾಗ**

ಅಂತಹ ಪರಿಸ್ಥಿತಿಯಲ್ಲಿ ಕಾರ್ಮಿಕರಿಗೆ ೧೯೩೬ರ ವೇತನ ಪಾವತಿ ಕಾಯಿದೆಯ ಪ್ರಕಾರ ಪರಿಹಾರ ಪಡೆಯುವ ಹಕ್ಕಿದೆ.

**೧೩. ಪುರುಷರಿಗೆ ಮತ್ತು ಮಹಿಳೆಯರಿಗೆ ಬೇರೆ ಬೇರೆ ದರಗಳಲ್ಲಿ ವೇತನಗಳನ್ನು ಪಾವತಿಯ ವಿಧಾನ**

ಪುರುಷ ಹಾಗೂ ಮಹಿಳೆಯರಿಬ್ಬರೂ ಸಮಾನವಾದ ವೇತನಗಳನ್ನು ಪಡೆಯುವ ಹಕ್ಕಿದೆ. ವಾಸ್ತವವಾಗಿ ಯಾವುದೇ ರೀತಿಯ ಲಿಂಗ ಭೇದವನ್ನು ನಿಷೇಧಿಸಲಾಗಿದೆ.

**೧೪. ಕೆಲಸದ ಸ್ಥಳದಲ್ಲಿ ಕೆಲಸಗಾರರಿಗೆ ನಿರ್ದಿಷ್ಟವಾದ ಸೌಕರ್ಯಗಳು**

ಕೆಲಸದ ಸ್ಥಳದಲ್ಲಿ ಮೂಲಭೂತ ಸೌಕರ್ಯಗಳನ್ನು ಒದಗಿಸಬೇಕಾಗುತ್ತದೆ. "ಶುದ್ಧವಾದ ಕುಡಿಯುವ ನೀರು, ಮಕ್ಕಳಿಗೆ ಹಾಗೂ ವಿಶ್ರಾಂತಿ ಸಮಯದಲ್ಲಿ ಕೆಲಸಗಾರರಿಗೆ ನೆರಳು, ಕೆಲಸ ಮಾಡುವ ಸಮಯದಲ್ಲಿ ಸಂಭವಿಸಬಹುದಾದ ಸಣ್ಣಪುಟ್ಟ ಗಾಯಗಳಿಗೆ ಚಿಕಿತ್ಸೆ, ಆರೋಗ್ಯಕ್ಕೆ ಅಪಾಯವನ್ನು ತಂದೊಡ್ಡುವಂತಹ ಇನ್ನಾವುದೇ ಪ್ರಸಂಗಗಳಲ್ಲಿ ಚಿಕಿತ್ಸೆ, ಔಷಧೋಪಚಾರಗಳನ್ನು ನೀಡುವುದಕ್ಕಾಗಿ ಸುಸಜ್ಜಿತ ಪ್ರಥಮ ಚಿಕಿತ್ಸಾ ಪೆಟ್ಟಿಗೆಯ ಲಭ್ಯತೆ".

**೧೫. ಉದ್ಯೋಗ ಖಾತರಿ ಕಾಯಿದೆಯ ಅಡಿಯಲ್ಲಿ ನಿರುದ್ಯೋಗ ಭತ್ಯೆಯನ್ನು ಪಡೆಯಲು ಅರ್ಹರಾದವರು**

ಯಾರೊಬ್ಬರಾಗಲಿ, ಅರ್ಜಿ ಸಲ್ಲಿಸಿದ ೧೫ ದಿನಗಳೊಳಗಾಗಿ ಅವರಿಗೆ ಉದ್ಯೋಗವನ್ನು ಒದಗಿಸದೇ ಇದ್ದಲ್ಲಿ ಅಂದರೆ ಮುಂಚಿತವಾಗಿ ಸಲ್ಲಿಸಿದ ಅರ್ಜಿಗಳ ವಿಚಾರದಲ್ಲಿ ಉದ್ಯೋಗ ಅಪೇಕ್ಷಿಸಿ ಸಲ್ಲಿಸಿದ ದಿನಾಂಕದಿಂದ ಹದಿನೈದು ದಿನಗಳೊಳಗಾಗಿ ಅಂತಹವರು ನಿರುದ್ಯೋಗ ಭತ್ಯೆಗೆ ಅರ್ಹರಾಗಿರುವರು.

**೧೬. ಅಂತಹ ಸನ್ನಿವೇಶಗಳಲ್ಲಿ ರಾಜ್ಯ ಸರ್ಕಾರವು ನಿರುದ್ಯೋಗ ಭತ್ಯೆಯನ್ನು ಕೊಡಲು ಬದ್ಧತೆ**

ಉದ್ಯೋಗವನ್ನು ಪಡೆಯದೆ ಇರುವಂತಹ ಕೆಲಸಗಾರರು ನಿರುದ್ಯೋಗ ಭತ್ಯೆ ಪಡೆಯಲು ಷರತ್ತಿಲ್ಲದ ಹಕ್ಕನ್ನು ಹೊಂದಿರುತ್ತಾರೆಂದು ಪ್ರಕರಣ– ೭(೧) ತಿಳಿಸುತ್ತದೆ. ಪ್ರಕರಣ –೭(೩) ರಲ್ಲಿ ಇದನ್ನು ಸಮರ್ಥಿಸಿ ಈ ರೀತಿ ತಿಳಿಸಲಾಗಿದೆ. ನಿರುದ್ಯೋಗ ಭತ್ಯೆಯ ಪಾವತಿಯು "ರಾಜ್ಯ ಸರ್ಕಾರವು ನಿರುದ್ಯೋಗ ಭತ್ಯೆ ಪಡೆಯಲು ನಿಗದಿ ಮಾಡುವ ಅರ್ಹತೆಗೆ ಸಂಬಂಧವಾದ ಕರಾರು ಮತ್ತು

ಷರತ್ತಿಗೊಳಪಟ್ಟು ಈ ಕಾಯಿದೆಯ ಕಟ್ಟುಪಾಡು ಹಾಗೂ ರಾಜ್ಯದ ಆರ್ಥಿಕ ಸಾಮರ್ಥ್ಯಕ್ಕೆ ಅನುಗುಣವಾಗಿರುತ್ತದೆ".

## ೧೭. ನಿರುದ್ಯೋಗ ಭತ್ಯೆಯ ಪಾತ್ರ

ನಿರುದ್ಯೋಗ ಭತ್ಯೆಯು ಹಲವಾರು ಪಾತ್ರಗಳನ್ನು ವಹಿಸುತ್ತದೆ. ಮೊದಲನೆಯದಾಗಿ, ಉದ್ಯೋಗಕ್ಕಾಗಿ ಕಾಯುತ್ತಿರುವವರಿಗೆ ಒಂದು ಪರಿಮಿತ ರೂಪದ ನಿರುದ್ಯೋಗ ನೆರವನ್ನು ನೀಡುತ್ತದೆ. ಎರಡನೆಯದಾಗಿ, ಎಲ್ಲ ಅಭ್ಯರ್ಥಿಗಳಿಗು ಉದ್ಯೋಗ ಒದಗಿಸುವ ಕಾರ್ಯದಲ್ಲಿ ಸಂಬಂಧಿತ ಅಧಿಕಾರ ವರ್ಗದವರು ವಿಫಲಗೊಳ್ಳುತ್ತಿದ್ದಾರೆ ಎಂಬುದಕ್ಕೆ ಈ ನಿರುದ್ಯೋಗ ಭತ್ಯೆಯು "ಸ್ಪಷ್ಟ ಸಂಕೇತ"ವಾಗಿದೆ. ಮೂರನೆಯದಾಗಿ, ನಿರುದ್ಯೋಗ ಭತ್ಯೆಯ ಪಾವತಿಯು ರಾಜ್ಯ ಸರ್ಕಾರದ ಜವಾಬ್ದಾರಿಯಾಗಿರುವ ಕಾರಣ ಈ ವೈಫಲ್ಯಕ್ಕಾಗಿ ರಾಜ್ಯ ಸರ್ಕಾರಕ್ಕೆ ಈ ಭತ್ಯೆಯು ಒಂದು ರೀತಿಯಲ್ಲಿ ದಂಡವಾಗಿ ಪರಿಣಮಿಸುತ್ತದೆ.

ಉದ್ಯೋಗವನ್ನು ಒದಗಿಸುವಲ್ಲಿ ಈ "ಶಿಕ್ಷೆ"ಯು ರಾಜ್ಯ ಸರ್ಕಾರ್ಕಕೆ ಒಂದು ಬಲವಾದ ಪ್ರೇರಕ ಶಕ್ತಿಯಾಗುವುದು. ಏಕೆಂದರೆ ಉದ್ಯೋಗ ಸಂಬಂಧವಾದ ಖರ್ಚು ವೆಚ್ಚಗಳನ್ನು ಬಹು ಮಟ್ಟಿಗೆ ಕೇಂದ್ರ ಸರ್ಕಾರವೇ ವಹಿಸಿಕೊಳ್ಳುವದು ಮತ್ತು ನಿರುದ್ಯೋಗ ಭತ್ಯೆಯನ್ನು ರಾಜ್ಯ ಸರ್ಕಾರವು ಪಾವತಿ ಮಾಡುವುದು. ಆದ್ದರಿಂದ ರಾಜ್ಯ ಸರ್ಕಾರಗಳು ನಿರುದ್ಯೋಗ ಭತ್ಯೆಯನ್ನು ಪಾವತಿ ಮಾಡುವುದರ ಬದಲು ಉದ್ಯೋಗಾವಕಾಶಗಳನ್ನು ಕಲ್ಪಿಸಿ ರಾಜ್ಯ ಸರ್ಕಾರದ "ಹಣವನ್ನು ಉಳಿಸಬಹುದು" ಆದಾಗ್ಯೂ ಈ ಪ್ರೋತ್ಸಾಹದಾಯಕ ಕ್ರಮವು ಪರಿಣಾಮಕಾರಿಯಾಗಲು ನಿಜಕ್ಕೂ ನಿರುದ್ಯೋಗ ಭತ್ಯೆಯನ್ನು ಪಾವತಿ ಮಾಡಲೇಬೇಕು. ಇದು ಸಂಭವಿಸಿದೆ.

## ೧೮. ನಿರುದ್ಯೋಗ ಭತ್ಯೆಯ ಮಟ್ಟ

ನಿರುದ್ಯೋಗ ಭತ್ಯೆಯನ್ನು ರಾಜ್ಯ ಸರ್ಕಾರವು ನಿಗದಿ ಮಾಡುತ್ತದೆ. ಅದು ಮೊದಲನೆಯ ೩೦ ದಿನಗಳವರೆಗೆ ವೇತನ ದರದ ೧/೪ ಭಾಗಕ್ಕಿಂತ ಕಮ್ಮಿ ಇರುವುದಿಲ್ಲ. ನಂತರ ಅದು ವೇತನ ದರದ ೧/೨ ಭಾಗಕ್ಕಿಂತ ಕಡಿಮೆ ಇರುವುದಿಲ್ಲ.

**ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ – ಕರ್ನಾಟಕ**

ಸ್ವಾತಂತ್ರ್ಯಾನಂತರ ದೇಶದಲ್ಲಿ ಈವರೆಗೆ ಜಾರಿಗೊಂಡ ಗ್ರಾಮೀಣ ಉದ್ಯೋಗ ಭರವಸೆ ಕಾರ್ಯಕ್ರಮಗಳ ಸಾಧಕ – ಬಾಧಕಗಳನ್ನು ಗಮನದಲ್ಲಿಟ್ಟುಕೊಂಡು ಕೇಂದ್ರ ಸರ್ಕಾರ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಅಧಿನಿಯಮ ರೂಪಿಸಿದೆ. "ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಅಧಿನಿಯಮ – ೨೦೦೫", ದಿನಾಂಕ ೦೭-೦೯-೨೦೦೫ ರಂದು ಭಾರತದ ರಾಷ್ಟ್ರ ಪತ್ರದಲ್ಲಿ ಪ್ರಕಟಿಸಲಾಗಿದೆ. ಆರಂಭದಲ್ಲಿ ದೇಶದ ೨೦೦ ಜಿಲ್ಲೆಗಳಲ್ಲಿ ಅನುಷ್ಠಾನಗೊಳಿಸಿ, ಮುಂದಿನ ೫ವರ್ಷಗಳ ಅವಧಿಯಲ್ಲಿ ದೇಶದ ಎಲ್ಲಾ ಜಿಲ್ಲೆಗಳಿಗೆ ವಿಸ್ತರಿಸುವ ಉದ್ದೇಶ ಹೊಂದಲಾಗಿದೆ. ಈ ಯೋಜನೆಗೆ ದಿನಾಂಕ: ೨೬-೧೧-೨೦೦೯ ರಂದು ಮಹಾತ್ಮಾಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತ್ರಿ ಯೋಜನೆಯ ಎಂದು ಹೆಸರಿಡಲಾಯಿತು.

ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿಯೋಜನೆಯನ್ನು ದೇಶದ ವಿವಿಧ ರಾಜ್ಯಗಳು ಅನುಷ್ಠಾನಗೊಳಿಸುತ್ತಿದ್ದು, ಪ್ರಾದೇಶಿಕ ಭಿನ್ನತೆ ಅಂಶಗಳನ್ನು ಗಮನದಲ್ಲಿಟ್ಟುಕೊಂಡು. ಅಧಿನಿಯಮಕ್ಕೆ ಪೂರಕವಾಗಿ ನಿಯಮಗಳನ್ನು ರಪಿಸಿಕೊಂಡಿವೆ. ಈ ನಿಟ್ಟಿನಲ್ಲಿ ಕರ್ನಾಟಕ ಸರ್ಕಾರ "ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ – ಕರ್ನಾಟಕ" ಎಂಬ ಹೆಸರಿನಲ್ಲಿ ದಿನಾಂಕ: ೦೮-೦೨-೨೦೦೭ರ ಕರ್ನಾಟಕ ರಾಜ್ಯ ಪ್ರಪತ್ರದಲ್ಲಿ ಪ್ರಕಟಿಸಿದೆ. ಅಂದಿನಿಂದ "ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಕಾತರಿ ಯೋಜನೆ – ಕರ್ನಾಟಕ" ಜಾರಿಗೊಂಡಿದೆ. ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಅಧಿನಿಯಮ – ೨೦೦೫ ಕಾರ್ಯಕ್ರಮವನ್ನು ಕೇಂದ್ರ ಸರ್ಕಾರ ಬೇರೆ ಜಿಲ್ಲೆಗಳ ಅಥವಾ ಆ ಜಿಲ್ಲೆಗಳ ಭಾಗಗಳಿಗೆ ಅಧಿಸೂಚಿಸುವ ದಿನಾಂಕಗಳಂದು ಜಾರಿಗೆ ಬಂದಿರುತ್ತದೆ.

ಮೊದಲ ಹಂತದಲ್ಲಿ ರಾಜ್ಯದ ೫ ಜಿಲ್ಲೆಗಳ ೩೨ ತಾಲ್ಲೂಕುಗಳನ್ನು ಡಾ॥ ನಂಜುಂಡಪ್ಪ ವರದಿಯ ಸೂಚ್ಯಂಕದ ಆಧಾರದಂತೆ ಆಯ್ಕೆಮಾಡಲಾಗಿದೆ. ರಾಜ್ಯದ ಬೀದರ್, ಗುಲ್ಬರ್ಗಾ, ರಾಯಚೂರು, ದಾವಣಗೆರೆ, ಮತ್ತು ಚಿತ್ರದುರ್ಗ, ಜಿಲ್ಲೆಗಳಲಿಲ ೨೦೦೬-೦೭ ನೇ ಸಾಲಿನಿಂದ ಅನುಷ್ಠನಗೊಳಿಸಲಾಗಿದೆ. ಮುಂದುವರೆದು ೨೦೦೭-೦೮ ರ ಆರ್ಥಿಕ ವರ್ಷದಿಂದ ಎರಡನೆ ಹಂತದಲ್ಲಿ ಹಾಸನ, ಕೊಡಗು, ಚಿಕ್ಕಮಗಳೂರು, ಶಿವಮೊಗ್ಗ, ಬೆಳಗಾವಿ ಹಾಗೂ ಬಳ್ಳಾರಿ ಜಿಲ್ಲೆಗಳನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಒಟ್ಟಾರೆ ರಾಜ್ಯದ ೧೧ ಜಿಲ್ಲೆಗಳಲ್ಲಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯನ್ನು ಅನುಷ್ಠಾನಗೊಳಿಸಿ, ಈಗ ಮತ್ತೆ ಉಳಿದ ೧೮ ಜಿಲ್ಲೆಗಳಲ್ಲಿ ಜಾರಿಗೆ ತಂದಿದೆ.

**ಯೋಜನೆಯ ಜಿಲ್ಲೆಗಳಿಗೆ ರಾಷ್ಟ್ರೀಯ ಪುರಸ್ಕಾರ**

ಮಹಾತ್ಮಾಗಾಂಧಿ ರಾಷ್ಟ್ರೀಯ ಉದ್ಯೋಗ ಖಾತರಿ ಯೋಜನೆ ಅನುಷ್ಠಾನದಲ್ಲಿ ಅಸಮಾನ್ಯ ಸಾಧನೆ ಮಾಡಿದ ಎರಡು ಜಿಲ್ಲೆಗಳಿಗೆ (ಗುಲ್ಬರ್ಗ ಮತ್ತು ಬೆಳಗಾವಿ) ೨೦೦೮-೦೯ ನೇ ಸಾಲಿನ ಪ್ರಶಸ್ತಿಯನ್ನು ದಿ. ೨-೨-೨೦೧೦ ರಂದು ನೀಡಲಾಯಿತು.

**ಈ ಯೋಜನೆಗೆ ಬಿಡುಗಡೆಯಾಗಿರುವ ಮತ್ತು ಖರ್ಚು ಮಾಡಿದ ಹಣ**

| ೨೦೦೬-೦೭ | ಬಿಡುಗಡೆಯಾದ ಹಣ | ಖರ್ಚು ಮಾಡಿದ ಹಣ |
|---|---|---|
| ೨೦೦೭-೦೮ | ೨೯೪.೬೫ ಕೋಟಿ | ೨೪೯.೦೦ ಕೋಟಿ |
| ೨೦೦೮-೦೯ | ೮೮೫.೯೯ ಕೋಟಿ | ೨೩೬.೫೧ ಕೋಟಿ |
| ೨೦೦೯-೧೦ | ೨೮೪೮.೦೦ ಕೋಟಿ | ೩೫೭.೮೭ ಕೋಟಿ |
| ೨೦೧೦-೧೧ | ೪೮೭೧.೦೦ ಕೋಟಿ | ೨೬೫೯.೦೦ ಕೋಟಿ |

**ಉದ್ದೇಶಗಳು**

**ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯ ಮುಖ್ಯ ಉದ್ದೇಶಗಳೆಂದರೆ**

೧. ಸ್ವ ಇಚ್ಚೆಯಿಂದ ಅರ್ಜಿ ಸಲ್ಲಿಸುವ ಅಕುಶಲ ದೈಹಿಕ ಕೆಲಸ ಬಯಸುವ ಗ್ರಾಮೀಣ ಪ್ರದೇಶದ ವಯಸ್ಕ ಸದಸ್ಯರ ಪ್ರತಿ ಕುಟುಂಬಕ್ಕೆ ಒಂದು ಆರ್ಥಿಕ ವರ್ಷದಲ್ಲಿ ೧೦೦ ಮಾನವ ದಿನಗಳ ಉದ್ಯೋಗವನ್ನು ಒದಗಿಸಿ ಅವರ ಜೀವನಕ್ಕೆ ಭದ್ರತೆ ಒದಗಿಸುವುದು.

೨. ದೀರ್ಘ ಕಾಲ ಬಾಳಿಕೆ ಬರುವ ಆಸ್ತಿಗಳನ್ನು ಸೃಜಿಸುವುದು.

೩. ಗ್ರಾಮೀಣ ಜನರಿಗೆ ದೀರ್ಘ ಕಾಲದ ಜೀವನೋಪಾಯದ ಮಾರ್ಗಗಳನ್ನು ಬಲಪಡಿಸುವುದು.

೪. ಗ್ರಾಮೀಣ ಮಹಿಳೆಯರ ಸಬಲೀಕರಣ ಮತ್ತು ವಲಸೆ ಹೋಗುವುದನ್ನು ತಪ್ಪಿಸುವುದು.

೫. ಸ್ವಂತ ಆಸ್ತಿ ಮತ್ತು ಸಾರ್ವಜನಿಕ ಆಸ್ತಿಗಳನ್ನು ಸೃಜಿಸುವುದು ಮತ್ತು ಅಭಿವೃದ್ಧಿ ಪಡಿಸುವುದು.

೬. ಗ್ರಾಮೀಣ ಅಕುಶಲ ಜನರು ಆರ್ಥಿಕ ಮತ್ತು ಆರ್ಥಿಕೇತರವಾಗಿ ಸಬಲೀಕರಣ ಹೊಂದುವುದು.

**ಹಕ್ಕುಗಳು ಮತ್ತು ಅಧಿಕಾರಗಳು**

ಈ ಯೋಜನೆಯಡಿ ತೊಡಗಿಸಿಕೊಳ್ಳುವ ಕೂಲಿ ಕಾರ್ಮಿಕರಿಗೆ ಕೆಳಕಂಡ ಹಕ್ಕುಗಳು ಮತ್ತು ಅಧಿಕಾರಗಳನ್ನು ನೀಡಲಾಗಿದೆ.

೧. ಕುಟುಂಬ ಉದ್ಯೋಗ ಚೀಟಿಯಲ್ಲಿ ಹೆಸರಿರುವ ಕುಟುಂಬದ ಎಲ್ಲಾ ವಯಸ್ಕರು, ಅಕುಶಲ ದೈಹಿಕ ಕೆಲಸಕ್ಕಾಗಿ ಅರ್ಜಿ ಸಲ್ಲಿಸಲು ಹಕ್ಕುಳ್ಳವರಾಗಿರುತ್ತಾರೆ.

೨. ಒಂದು ಆರ್ಥಿಕ ವರ್ಷದಲ್ಲಿ ಒಂದು ಕುಟುಂಬ ೧೦೦ ಮಾನವ ದಿನಗಳ ಅಕುಶಲ ಕೆಲಸಕ್ಕಾಗಿ ಅರ್ಜಿ ಸಲ್ಲಿಸಲು ಹಕ್ಕುಳ್ಳವರಾಗಿರುತ್ತಾರೆ.

೩. ಅಕುಶಲ ಉದ್ಯೋಗ ಕೋರಿದ ೧೫ ದಿನಗಳೊಳಗಾಗಿ ಉದ್ಯೋಗ ಒದಗಿಸಿದ್ದಲ್ಲಿ ಅರ್ಜಿದಾರರು ಆರ್ಥಿಕ ವರ್ಷದ ಮೊದಲ ೩೦ ದಿಗನಳಿಗೆ ಕನಿಷ್ಠ ಕೂಲಿಯ ಶೇ.೨೫ ರಷ್ಟು ಮತ್ತು ಉಳಿದ ಅವಧಿಗೆ ಕೂಲಿಯು ಶೇ.೫೦ ರಷ್ಟು ನಿರುದ್ಯೋಗ ಭತ್ಯೆಯಾಗಿ ಪಡೆಯಲು ಹಕ್ಕುಳ್ಳವರಾಗಿರುತ್ತಾರೆ.

೪. ಸಾಧ್ಯವಾದಷ್ಟು ಮಟ್ಟಿಗೆ ಆ ಕೆಲಸವನ್ನು ಆ ಗ್ರಾಮದ ವ್ಯಾಪ್ತಿಯಲ್ಲಿ ಒದಗಿಸಬೇಕು. ಅವರು ವಾಸ್ತವವಿರುವ ಗ್ರಾಮದಿಂದ ೫ ಕಿ. ಮೀ. ಗಿಂತ ಹೆಚ್ಚಿನ ದೂರದಲ್ಲಿ ಕೆಲಸವನ್ನು ಒದಗಿಸಿದ್ದೇ ಆದರೆ ಕನಿಷ್ಠ ಕೂಲಿಯ ಶೇ.೧೦ ರಷ್ಟನ್ನು ಹೆಚ್ಚುವರಿಯಾಗಿ ಸಾರಿಗೆ ಮತ್ತು ಜೀವನ ವೆಚ್ಚಕ್ಕಾಗಿ ಪಡೆಯಲು ಹಕ್ಕುಳ್ಳವರಾಗಿರುತ್ತಾರೆ.

೫. ಕೆಲಸ ಕೋರುವ ನೋಂದಾಯಿತ ಅರ್ಜಿದಾರರ ಪೈಕಿ ಕನಿಷ್ಠ ೧/೩ ರಷ್ಟು ಮಹಿಳೆಯರಿಗೆ ಆದ್ಯತೆ ಮೇರೆಗೆ ಉದ್ಯೋಗ ಒದಗಿಸಬೇಕು.

೬. ಪಾವತಿಗೆ ಬಾಕಿಯಾದ ೧೫ ದಿನಗಳೊಳಗಾಗಿ ಕೂಲಿಯನ್ನು ಪಾವತಿಸದಿದ್ದಲ್ಲಿ ಅವರು ಕೂಲಿ ಪಾವತಿ ಅಧಿನಿಯಮ ೧೯೩೬ (೪/೧೯೩೬) ರ ಅನ್ವಯ ಪರಿಹಾರ ಪಡೆಯಲು ಹಕ್ಕುಳ್ಳವರಾಗಿರುತ್ತಾರೆ.

೭. ಸಮಾನ ವೇತನ ಅಧಿನಿಯಮ ೧೯೭೬ (೨೫/೧೯೭೬) ರನ್ವಯ ಲಿಂಗಾದಾರಿತ ತಾರತಮ್ಯ ಮಾಡತಕ್ಕದ್ದಲ್ಲ.

೮. ಕಾಮಗಾರಿಯ ಸ್ಥಳದ ಸಮೀಪ ಸ್ವಚ್ಚವಾದ ಕುಡಿಯುವ ನೀರಿನ ವ್ಯವಸ್ಥೆ ಮಾಡುವುದು.

೯. ಕೆಲಸದ ಅವಧಿಯಲ್ಲಿ ಉಂಟಾಗಬಹುದಾದ ಸಣ್ಣಮಟ್ಟ ಗಾಯಗಳಿಗಾಗಿ ಚಿಕಿತ್ಸೆ ನೀಡಲು ಪ್ರಥಮ ಚಿಕಿತ್ಸೆ ಪೆಟ್ಟಿಗೆಯನ್ನು ಒದಗಿಸಬೇಕು.

೧೦. ಕಾಮಗಾರಿಯ ಸ್ಥಳಕ್ಕೆ ಆರು ವರ್ಷಕ್ಕೂ ಕಡಿಮೆ ವಯಸ್ಸಿನ ಐದಕ್ಕಿಂತ ಹೆಚ್ಚಿನ ಮಕ್ಕಳು ಕಾರ್ಮಿಕರೊಂದಿಗೆ ಬಂದಲ್ಲಿ ಅವರನ್ನು ನೋಡಿಕೊಳ್ಳಲು ಕಾರ್ಮಿಕರ ಪೈಕಿ ಒಬ್ಬ ಮಹಿಳೆಯನ್ನು ನೇಮಿಸಬೇಕು ಮತ್ತು ದಿನದ ಕನಿಷ್ಠ ಕೂಲಿಯನ್ನು ಆ ಮಹಿಳೆಗೆ ಪಾವತಿಸಬೇಕು.

೧೧. ಕಾಮಗಾರಿಯ ಸ್ಥಳದಲ್ಲಿ ಕಾಮಗಾರಿಗೆ ಸಂಬಂಧಿಸಿದಂತೆ ಕಾರ್ಮಿಕರಿಗೆ ಗಾಯಗಳಾದಲ್ಲಿ ಉಚಿತ ವೈದ್ಯಕೀಯ ಚಿಕಿತ್ಸೆ ನೀಡಬೇಕು.

೧೨. ಕಾಮಗಾರಿ ಸಂಬಂಧ ಯಾವುದೇ ಕಾರ್ಮಿಕರಿಗೆ ಗಾಯಗಳಾಗಿ ಆಸ್ಪತ್ರೆಗೆ ದಾಖಲಾಗಬೇಕಾದ ಅಗತ್ಯ ಕಂಡುಬಂದಲ್ಲಿ ಅವರು ಔಷಧಿ ವೈದ್ಯಕೀಯ ಚಿಕಿತ್ಸೆ, ವಸತಿ, ಇತ್ಯಾದಿ ಉಚಿತ ವೈದ್ಯಕೀಯ ಸೌಲಭ್ಯಗಳನ್ನು ಪಡೆಯಲು ಹಕ್ಕುಳ್ಳವರಾಗಿರುತ್ತಾರೆ.

೧೩. ವೈದ್ಯಕೀಯ ಚಿಕಿತ್ಸೆ ಪಡೆಯುವ ಅವಧಿಗೆ ಪ್ರತಿ ದಿನಕ್ಕೆ ಆ ದಿನದ ಕೂಲಿಯ ಶೇ.೫೦ರಷ್ಟು ಕೂಲಿಯನ್ನು ದಿನಭತ್ಯೆಯಾಗಿ ಪಡೆಯಲು ಹಕ್ಕುಳ್ಳವರಾಗಿರುತ್ತಾರೆ.

೧೪. ಕಾಮಗಾರಿಯ ಕಾರಣದಿಂದಾಗಿ ಕಾರ್ಮಿಕರು ಶಾಶ್ವತವಾಗಿ ಅಂಗವಿಕಲರಾದರೆ ಅಥವಾ ಮೃತಪಟ್ಟರೆ ಸಂದರ್ಭಕ್ಕೆ ತಕ್ಕಂತೆ ಅವರು ಅವರ ವಾರಸುದಾರರು ರೂ. ೨೫,೦೦೦/- ಅಥವಾ ಕೇಂದ್ರ ಸರ್ಕಾರ ನಿಗದಿಪಡಿಸಬಹುದಾದ ಪರಿಹಾರ ಪಡೆಯಲು ಹಕ್ಕುಳ್ಳವರಾಗಿರುತ್ತಾರೆ.

**ನೋಂದಣಿ**

ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯಡಿ ಕೆಲಸ ಮಾಡಲು ಕುಟುಂಬದ ವಯಸ್ಕ ಸದಸ್ಯರ ಪೈಕಿ ಯಾರಾದರೂ ತಾವು ವಾಸವಿರುವ ಗ್ರಾಮ ಪಂಚಾಯಿತಿಗೆ ನಮೂನೆ-೧ ರಲ್ಲಿ ದ್ವಿಪ್ರತಿಗಳಲ್ಲಿ ಅರ್ಜಿ ಸಲ್ಲಿಸಬೇಕು. ಹಾಗೆ ಸಲ್ಲಿಸುವ ಅರ್ಜಿಯಲ್ಲಿ ಕುಟುಬಂದ ವಯಸ್ಕ ಸದಸ್ಯರ ಹೆಸರು, ವಯಸ್ಸು, ವಿಳಾಸ ಇತ್ಯಾದಿ ವಿವರಗಳು ಇರಬೇಕು. ಅರ್ಜಿದಾರರಿಗೆ ಗ್ರಾಮ ಪಂಚಾಯಿತಿ ಕಾರ್ಯದರ್ಶಿಯು, ದಿನಾಂಕ ಸೂಚಿಸುವ ಸ್ವೀಕೃತಿ ನೀಡಿ, ವಿವರಗಳನ್ನು ಅರ್ಜಿಗಳ ನೊಂದಣಿ ವಹಿ (ನಮೂನೆ-೨) ಮತ್ತು ಉದ್ಯೋಗಾಕಾಂಕ್ಷಿಗಳ ಹಾಗೂ ಉದ್ಯೋಗದ ಅವಧಿ (ನಮೂನೆ-೩) ಯಲ್ಲಿ ದಾಖಲಿಸಬೇಕು. ಉದ್ಯೋಗ ಬೇಕೆನ್ನುವ ನೋಂದಣಿ ಪ್ರಕ್ರಿಯೆ ಕನಿಷ್ಠ ಐದು ವರ್ಷದವರೆಗೆ ಚಾಲ್ತಿಯಲ್ಲಿರುತ್ತದೆ. ಗ್ರಾಮ ಪಂಚಾಯತಿಗೆ ಅವಶ್ಯವೆನಿಸಿದ್ದಲ್ಲಿ ಉದ್ಯೋಗ ಚೀಟಿಯನ್ನು ನವೀಕರಿಸಬಹುದಾಗಿರುತ್ತದೆ.

**ಉದ್ಯೋಗ ಚೀಟಿ ವಿತರಣೆ**

ಅಗತ್ಯ ವಿಚಾರ ಮಾಡಿ ನೋಂದಾಯಿತ ಪ್ರತಿ ಕುಟುಂಬಕ್ಕೆ ಪ್ರತ್ಯೇಕ ಸಂಖ್ಯೆ ಇರುವ ಕುಟುಂಬದ ಉದ್ಯೋಗ ಚೀಟಿಯನ್ನು ಗ್ರಾಮ ಪಂಚಾಯಿತಿ ಕಾರ್ಯದರ್ಶಿ, ನಮೂನೆ-೪ ರಲ್ಲಿರುವಂತೆ ವಿತರಿಸಬೇಕು. ವಿವರಗಳನ್ನು ಕುಟುಂಬ ಉದ್ಯೋಗ ಚೀಟಿ ವಿತರಣಾ ವಹಿ ನಮೂನೆ-೫ ರಲ್ಲಿ ದಾಖಲಿಸಬೇಕು. ಉದ್ಯೋಗ ಚೀಟಿ ನೀಡಿದ ಒಂದು ತಿಂಗಳೊಳಗಾಗಿ ಕುಟುಂಬದ ನೋಂದಾಯಿತ ಪ್ರತಿ ಸದಸ್ಯರ ಸ್ಟಾಂಪ್ ಅಳತೆಯ ಭಾವಚಿತ್ರವನ್ನು ಉದ್ಯೋಗ ಚೀಟಿಗೆ ಅಂಟಿಸಬೇಕು. ಮತ್ತು ನೀಡಿದ ಕೂಲಿಯ ದಿನಗಳ ಹಾಗೂ ಪಾವತಿಸಿದ ಕೂಲಿಯ ವಿವರಗಳನ್ನು ಕುಟುಂಬ ಉದ್ಯೋಗ ಚೀಟಿ (ನಮೂನೆ-೪) ಹಾಗೂ ಉದ್ಯೋಗಾಕಾಂಕ್ಷಿಗಳ ಮತ್ತು ಉದ್ಯೋಗದ ವಹಿ (ನಮೂನೆ-೩) ರಲ್ಲಿ ಗ್ರಾಮ ಪಂಚಾಯತಿ ಕಾರ್ಯದರ್ಶಿ ಆಗಿಂದಾಗ್ಗೆ ದಾಖಲಿಸಬೇಕು.

ಕೆಲವು ಸಂದರ್ಭಗಳಲ್ಲಿ ಕಾರಣಾಂತರದಿಂದ ಮೂಲ ಉದ್ಯೋಗ ಚೀಟಿ ಕಳೆದು ಹೋದಲ್ಲಿ ಅಥವಾ ಹರಿದು ಹೋದಲ್ಲಿ ನಕಲು ಉದ್ಯೋಗ ಚೀಟಿಗಾಗಿ ಗ್ರಾಮ ಪಮಚಾಯಿತಿಗೆ ನಿಗದಿತ ಶುಲ್ಕ ಪಾವತಿಸಿ ಅರ್ಜಿ ಸಲ್ಲಿಸಬಹುದು. ಅರ್ಜಿ ಸಲ್ಲಿಸಿದ ಏಳು ದಿಗನಗಳೊಳಗಾಗಿ ಗ್ರಾಮ ಪಂಚಾಯಿತಿ ಕಾರ್ಯದರ್ಶಿ ಅರ್ಜಿಯನ್ನು ಪರಿಶೀಲಿಸಿ ಉದ್ಯೋಗ ಚೀಟಿಯ ನಕಲು ಪ್ರತಿಯನ್ನು ಅರ್ಜಿದಾರರಿಗೆ ವಿತರಿಸಬೇಕು. ಹೆಚ್ಚುವರಿ ಸದಸ್ಯರನ್ನು ಉದ್ಯೋಗ ಚೀಟಿಯಲ್ಲಿ ಸೇರಿಸುವ ಅಥವಾ ತೆಗೆದು ಹಾಕುವ ಕಾರ್ಯವನ್ನು ಅಗತ್ಯವಿದ್ದಾಗಲೆಲ್ಲಾ ಮಾಡಬೇಕು. ಮತ್ತು ಈ ರೀತಿ ಪರಿಷ್ಕರಿಸಿದ ಪಟ್ಟಿಯನ್ನು ಪ್ರತಿ ತಿಂಗಳು ಕಾರ್ಯಕ್ರಮ ಅಧಿಕಾರಿಗೆ ಕಳುಹಿಸಕೊಡಬೇಕು. ಉದ್ಯೋಗಾಕಾಂಕ್ಷಿಯು ತಪ್ಪು ಮಾಹಿತಿ ನೀಡಿ ನಂತರ ಉದ್ಯೋಗ ಚೀಟಿಯನ್ನು ಹಿಂತಿರುಗಿಸಲು ಹಾಗೂ ವಜಾಗೊಳಿಸಲು, ಕಾರ್ಯಕ್ರಮ ಅಧಿಕಾರಿಗೆ ವರದಿ ನೀಡಬೇಕು.

ಕಾರ್ಯಕ್ರಮ ಅಧಿಕಾರಿ/ಗ್ರಾಮ ಪಂಚಾಯಿತಿಯು ನಿಗದಿಪಡಿಸಿದ ಯಾವುದೇ ಕೆಲಸವನ್ನು ಉದ್ಯೋಗಾಕಾಂಕ್ಷಿಯು ತಿರಸ್ಕರಿಸುವಂತಿಲ್ಲ.

**ಕೆಲಸಕ್ಕಾಗಿ ಅರ್ಜಿ ಹಾಗೂ ಉದ್ಯೋಗ ನೀಡಿಕೆ**

ಉದ್ಯೋಗ ಚೀಟಿ ಹೊಂದಿರುವವರು ವೈಯಕ್ತಿವಾಗಿ ಅಥವಾ ಒಟ್ಟಾಗಿ ಉದ್ಯೋಗದ ಬೇಡಿಕೆಯ ವಿವರಗಳನ್ನು ನಮೂನೆ-೬ ರಲ್ಲಿ ದ್ವಿಪ್ರತಿಯಲ್ಲಿ ದಾಖಲಿಸಿ ಕೆಲಸಕ್ಕಾಗಿ ಅರ್ಜಿ ಸಲ್ಲಿಸಬೇಕು. ಒಂದು ಆರ್ಥಿಕ ವರ್ಷದಲ್ಲಿ ನಿಗದಿತ ಅವದಿಗೆ ಉದ್ಯೋಗವನ್ನು ಕೋರಿ ಮುಂಗಡ ಅರ್ಜಿಯನ್ನು ಸಹ ಸಲ್ಲಿಸಬಹುದು.

ಒಬ್ಬನೇ ವ್ಯಕ್ತಿ ಅಥವಾ ಒಂದು ಗುಂಪು ಒಂದಕ್ಕಿಂತ ಹೆಚ್ಚು ಅರ್ಜಿಗಳನ್ನು ಒಮ್ಮೆಗೆ ಸಲ್ಲಿಸಬಹುದು. ಆದರೆ ಇವುಗಳಲ್ಲಿ ಉದ್ಯೋಗ ಬೇಡಿಕೆಯ ಅವಧಿಯು ಪ್ರತ್ಯೇಕವಾಗಿರಬೇಕು.

ನಮೂನೆ – ೬ ರಲ್ಲಿ ದ್ವಿಪ್ರತಿಯಲ್ಲಿ ಉದ್ಯೋಗಕ್ಕಾಗಿ ಸಲ್ಲಿಸಿದ ಅರ್ಜಿಗಳನ್ನು ಗ್ರಾಮ ಪಂಚಾಯಿತಿ ಕಾರ್ಯದರ್ಶಿ ಸ್ವೀಕರಿಸಿ, ಅರ್ಜಿದಾರರಿಗೆ ಸ್ವೀಕೃತಿ ನೀಡಬೇಕು. ಕನಿಷ್ಠ ಸತತ ಹದಿನಾಲ್ಕು ದಿವಸಗಳಿಗೆ ಅರ್ಜಿದಾರರು ಕೆಲಸ ಕೇಳಬೇಕು. ಉದ್ಯೋಗಕ್ಕಾಗಿ ಸಲ್ಲಿಸಿದ ಅರ್ಜಿಗಳನ್ನು ಉದ್ಯೋಗ ಬೇಡಿಕೆ ವಹಿ ನಮೂನೆ – ೭ ರಲ್ಲಿ ದಾಖಲಿಸಬೇಕು. ಉದ್ಯೋಗ ಕೋರಿ ಅರ್ಜಿ ಸಲ್ಲಿಸಿದ ದಿನಾಂಕದಿಂದ ೧೫ ದಿನಗಳು ಅಥವಾ ಉದ್ಯೋಗ ಕೋರಿದ ದಿನಾಂಕ ಇವುಗಳ ಪೈಕಿ ಯಾವುದು ನಂತರವೋ ಅಷ್ಟರೊಳಗಾಗಿ ಕೆಲಸ ನೀಡಬೇಕು. ಚಾಲ್ತಿಯಲ್ಲಿರುವ ಅಥವಾ ಹೊಸದಾಗಿ ಪ್ರಾಂಭಿಸುವ ಕಾಮಗಾರಿಗಳಲ್ಲಿ ಉದ್ಯೋಗಕ್ಕಾಗಿ ಅರ್ಜಿ ಸಲ್ಲಿಸಿದವರಿಗೆ ಗ್ರಾಮ ಪಂಚಾಯಿತಿ ಉದ್ಯೋಗ ನೀಡಿ ನಮೂನೆ – ೮ ರಲ್ಲಿ ನೋಟೀಸನ್ನು ಜಾರಿ ಮಾಡಬೇಕು. ಉದ್ಯೋಗ ನೀಡಿದ ವಿವರವನ್ನು ನಮೂನೆ – ೯ ರಲ್ಲಿ ಸಾರ್ವಜನಿಕರ ತಿಳುವಳಿಕೆಗಾಗಿ ಪ್ರಚುರಪಡಿಸಬೇಕು. ಅಂಗವಿಕಲ ವ್ಯಕ್ತಿಗಳಿಗೆ ಯೋಜನೆಯ ಭಾಗವಾಗಿರುವ ಹಾಗೂ ಸೂಕ್ತವಿರುವ ಕೂಲಿ ಕೆಲಸಗಳನ್ನು ವಹಿಸಬೇಕು.

ಗ್ರಾಮ ಪಂಚಾಯಿತಿ ವ್ಯಾಪ್ತಿಯಲ್ಲಿ ಅರ್ಜಿದಾರರಿಗೆ ಕೆಲಸವನ್ನು ಕೊಡಲು ಸಾಧ್ಯವಾಗದಿದ್ದಲ್ಲಿ ಅವರ ಅರ್ಜಿಗಳನ್ನು ಗ್ರಾಮ ಪಂಚಾಯಿತಿ ಕಾರ್ಯದರ್ಶಿಯು ಕಾರ್ಯಕ್ರಮ ಅಧಿಕಾರಿಗೆ ಅಂದರೆ ತಾಲ್ಲೂಕು ಪಂಚಾಯಿತಿ ಕಾರ್ಯನಿರ್ವಾಹಕ ಅಧಿಕಾರಿಗೆ ಸಲ್ಲಿಸಬೇಕು. ಕಾರ್ಯಕ್ರಮ ಅಧಿಕಾರಿಯು ಆ ತಾಲ್ಲೂಕಿನಲ್ಲಿ ಇತರೆ ಗ್ರಾಮ ಪಂಚಾಯಿತಿಯಲ್ಲಿ ಲಭ್ಯವಿರಬಹುದಾದ ಕೆಲಸಕ್ಕೆ ಇವರನ್ನು ತೊಡಗಿಸಲು ಅಗತ್ಯವಿರುವ ಸಮನ್ವಯತೆ ಮಾಡಿ, ಉದ್ಯೋಗ ನೀಡಿಕೆ ಪತ್ರವನ್ನು ಹೊರಡಿಸಿ ಅದನ್ನು ಸಂಬಂಧಿಸಿದ ಎರಡು ಗ್ರಾಮ ಪಂಚಾಯಿತಿಗಳ ಕಾರ್ಯದರ್ಶಿಗಳಿಗೆ ಕಳುಹಿಸಿಕೊಡಬೇಕು.

**ಕಡ್ಡಾಯವಾಗಿ ಪಾಲಿಸಬೇಕಾದ ಅಂಶಗಳು**

ಒಂದು ಆರ್ಥಿಕ ವರ್ಷದಲ್ಲಿ ಉದ್ಯೋಗ ಬಯಸುವ ಪ್ರತಿ ನೋಂದಾಯಿತ ಕುಟುಂಬಕ್ಕೆ ೧೦೦ ದಿನಗಳಿಗೆ ಕಡಿಮೆ ಇಲ್ಲದಂತೆ ಆ ಕುಶಲ ಕೆಲಸವನ್ನು ಒದಗಿಸುವದು. ವಾರದ ಕೂಲಿಯನ್ನು ೧೫ ದಿನದೊಳಗಾಗಿ ಪಾವತಿಸತಕ್ಕದ್ದು. ಮಹಿಳೆಯರಿಗೆ ಮತ್ತು ಪುರುಷರಿಗೆ ಸಮಾನ ಕೂಲಿ ಒದಗಿಸುವುದು. ಜನರು ಮಾಡಬಹುದಾದ ಕೆಲಸಗಳಿಗೆ ಯಂತ್ರಗಳನ್ನು ಬಳಸತಕ್ಕದ್ದಲ್ಲ. ಯೋಜನೆಯ ಕಾಮಗಾರಿಗಳನ್ನು ಗುತ್ತಿಗೆ ನೀಡುವಂತಿಲ್ಲ. ಈ ಯೋಜನೆಯಡಿ ಗುತ್ತಿಗೆದಾರ ಪದ್ಧತಿಯನ್ನು ಸಂಪೂರ್ಣ ನಿಷೇಧವಾಗಿದ್ದು

ಯೋಜನೆಯಲ್ಲಿ ಕೈಗೊಳ್ಳಬೇಕಾದ ಕಾಮಗಾರಿಗಳನ್ನು ಗ್ರಾಮ ಸಭೆಯಲ್ಲಿಯೇ ಗುರುತಿಸುವುದು ಮುಖ್ಯವಾಗಿದೆ. ಗ್ರಾಮ ಹಂತದಲ್ಲಿ ಗ್ರಾಮ ಸಭೆಯಲ್ಲಿ ಗುರುತಿಸಿ, ಗ್ರಾಮ ಪಂಚಾಯಿತಿ ಅನುಮೋದಿಸಿದ ತಾಲ್ಲೂಕು ಮಟ್ಟದಲ್ಲಿ ಜಿಲ್ಲಾ ಪಂಚಾಯಿತಿ ಅನುಮೋದಿಸಿದ ಕಾಮಗಾರಿಗಳನ್ನು ಮಾತ್ರ ತೆಗೆದುಕೊಳ್ಳತಕ್ಕದ್ದು.

**ಕಾಯ್ದೆ ವಿರುದ್ಧ ಧೋರಣೆಗೆ ದಂಡ**

ಈ ಕಾಯ್ದೆಯಡಿಯಲ್ಲಿ ಯೋಜನೆಯ ಅನುಷ್ಠಾನದ ವಿರುದ್ಧ ದೋರಣೆ ತಳೆದರೆ ರೂ. ೧೦,೦೦೦/- ವರೆಗೆ ದಂಡ ವಿಧಿಸಲಾಗುತ್ತದೆ.

G18741

**ರಕ್ಷಣೆ**

ಯೋಜನೆಯನ್ನು ಒಳ್ಳೆಯ ದೃಷ್ಟಿಯಿಂದ ಕಾರ್ಯಗತಗೊಳಿಸುವಾಗ ಯಾವುದೇ ಸಂದರ್ಭದಲ್ಲೂ ಜಿಲ್ಲಾ ಕಾರ್ಯಕ್ರಮ ಸಮನ್ವಯಾಧಿಕಾರಿ ಅಥವಾ ಕಾರ್ಯಕ್ರಮ ಅಧಿಕಾರಿ ಅಥವಾ ಯಾವುದೇ ಸಾರ್ವಜನಿಕ ಸೇವಕನ ವಿರುದ್ಧ ಯೋಜನೆಗೆ ಸಂಬಂಧಿಸಿದ ಯಾವುದೇ ಕ್ರಿಮಿನಲ್ ಮೊಕದ್ದಮೆಯನ್ನಾಗಲಿ ಅಥವಾ ಇತರೆ ಖಟ್ಲೆಗಳನ್ನಾಗಲಿ ನ್ಯಾಯಾಲಯದಲ್ಲಿ ಹೂಡಲು ಅವಕಾಶವಿರುವುದಿಲ್ಲ.

**ಕಾಮಗಾರಿ ಪ್ರಾರಂಭ ಪತ್ರ**

ಕಾಮಗಾರಿಗಳ ಒಟ್ಟು ಮೊತ್ತದ ಕನಿಷ್ಠ ಶೇ.೫೦ರಷ್ಟು ಕಾಮಗಾರಿಗಳನ್ನು ಗ್ರಾಮ ಪಂಚಾಯಿತಿಗಳು ನಿರ್ವಹಿಸಬೇಕು. ಉದ್ಯೋಗ ಬೇಡಿಕೆಗೆ ಅನುಸಾರವಾಗಿ ಕಾಮಗಾರಿಗಳನ್ನು ಆರಂಭಿಸಲು ಕಾಮಗಾರಿ ಪ್ರಾರಂಭ ಪತ್ರ ನೀಡುವಂತೆ ಗ್ರಾಮ ಪಂಚಾಯಿತಿ ಕಾರ್ಯದರ್ಶಿ ಕಾರ್ಯಕ್ರಮ ಅಧಿಕಾರಿಗೆ ಕೋರಿಕೆ ಸಲ್ಲಿಸಬೇಕು. ಜಿಲ್ಲಾ ಕಾರ್ಯಕ್ರಮ ಅಧಿಕಾರಿಯು ಆಡಳಿತಾತ್ಮಕ ಅನುಮೋದನೆ ನೀಡಿದ ಪಟ್ಟಿಯಲ್ಲಿರುವ ಅನುಕ್ರಮದಂತೆ ಕಾಮಗಾರಿಗಳನ್ನು ಆರಂಭಿಸಲು ಕಾರ್ಯಕ್ರಮ ಅಧಿಕಾರಿ ಗ್ರಾಮ ಪಂಚಾಯಿತಿಗಳಿಗೆ ಕಾಮಗಾರಿ ಪ್ರಾರಂಭ ಪತ್ರ ನೀಡಬೇಕು. ಕಾಮಗಾರಿ ಪ್ರಾರಂಭ ಪತ್ರ ಪಡೆದ ಕೂಡಲೆ ಕಾರ್ಯನಿರ್ವಹಣಾ ಏಜೆನ್ಸಿಗಳು ಕಾಮಗಾರಿಗಳನ್ನು ಪ್ರಾರಂಭಿಸಬೇಕು. ಮುಕ್ತಾಯದ ವರದಿಯೊಂದಿಗೆ ಕಾರ್ಯನಿರ್ವಹಣಾ ಏಜೆನ್ಸಿ ಕಾಮಗಾರಿಯನ್ನು ಅಂತಿಮಗೊಳಿಸಬೇಕು. ಪ್ರತಿ ಗ್ರಾಮ ಪಂಚಾಯಿತಿ ಮತ್ತು

ಪ್ರತಿ ಕಾರ್ಯನಿರ್ವಹಣಾ ಏಜೆನ್ಸಿ ಮಂಜೂರಾದ, ಅನುಷ್ಠಾನಗೊಳಿಸಿದ ಮತ್ತು ಮುಕ್ತಾಯಗೊಂಡ ಕಾಮಗಾರಿ ವಿವರಗಳನ್ನು ನಿಗದಿತ ವಹಿಯಲ್ಲಿ ನಿರ್ವಹಿಸಬೇಕು.

**ಕೂಲಿ ಪಾವತಿ**

ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯಡಿ ಕನಿಷ್ಠ ದಿನಗೂಲಿ ಪ್ರಾರಂಭದಲ್ಲಿ ರೂ. ೭೪ ಗಳಾಗಿತ್ತು. ಈಗ ೮೨ ರೂ. ಗಳಿಗೆ ಹೆಚ್ಚಿಸಲಾಗಿದೆ (ಪ್ರಸ್ತುತ ರೂ. ೧೨೫). ಕಾಮಗಾರಿ ಸ್ಥಳ ಕೂಲಿ ಕಾರ್ಮಿಕರ ವಾಸಸ್ಥಳದಿಂದ ೫ ಕಿ. ಮೀ .ಗಿಂತ ದೂರವಿದ್ದಲಿ, ಹೆಚ್ಚುವರಿ ಶೇ. ೧೦ ರಂತೆ ದಿನಗೂಲಿ ಪಾವತಿಸಬೇಕು. ಅಂದರೆ ೮ ರೂಪಾಯಿ ೨೦ ಪೈಸೆಯನ್ನು ಸೇರಿಸಿ ಒಟ್ಟು ೯೦ ರೂಪಾಯಿ ೨೦ ಪೈಸೆಗಳನ್ನು ಪಾವತಿಸಬೇಕು. ಪ್ರತಿ ವಾರಾಂತ್ಯ ಕೂಲಿ ಪಾವತಿ, ಅನಿವಾರ್ಯವಾದಲ್ಲಿ ೧೫ ದಿನಗಳಿಗೆ ಮೀರದಂತೆ ಕೂಲಿ ಪಾವತಿ ಮಾಡಬೇಕು. ಕುಟುಂಬದ ಯಾರೇ ಸದಸ್ಯರು ಗಳಿಸಿದ ಮಜೂರಿ ಹಣ ಕುಟುಂಬದ ಜಂಟಿ ಉಳಿತಾಯ ಖಾತೆಗೆ ಜಮೆ ಮಾಡಬೇಕು. ಕಾರ್ಯನಿರ್ವಹಣಾ ಏಜೆನ್ಸಿ ಯಾರೇ ಆದರೂ ಸಹ, ಅಕುಶಲ ಕಾರ್ಮಿಕರ ಕೂಲಿಯನ್ನು ಗ್ರಾಮ ಪಂಚಾಯಿತಿ ಮೂಲಕವೇ ಪಾವತಿಸಬೇಕು.

**ನಿರುದ್ಯೋಗ ಭತ್ಯೆ**

ಅಕುಶಲ ಕಾರ್ಮಿಕ ಉದ್ಯೋಗ ಕೋರಿ ಅರ್ಜಿ ಸಲ್ಲಿಸಿದ ೧೫ ದಿನಗಳೊಳಗಾಗಿ ಅಥವಾ ಮುಂಗಡ ಅರ್ಜಿಯಲ್ಲಿ ಸೂಚಿಸಿದ ದಿನಾಂಕ ಇವುಗಳಲ್ಲಿ ಯಾವುದು ನಂತರವೋ, ಅದರ ಒಳಗಾಗಿ ಉದ್ಯೋಗ ನೀಡದಿದ್ದಲ್ಲಿ, ನಿರುದ್ಯೋಗ ಭತ್ಯೆ ಪಾವತಿಗಾಗಿ ಅರ್ಜಿದಾರರು ಗ್ರಾಮ ಪಂಚಾಯಿತಿ ಕಾರ್ಯದರ್ಶಿಗೆ ಅರ್ಜಿ ಸಲ್ಲಿಸಬಹುದು. ಕಾರ್ಯದರ್ಶಿಯು ಈ ಅರ್ಜಿಗಳನ್ನು ಪರಿಶೀಲಿಸಿ ಅಗತ್ಯ ವಿವರಗಳೊಂದಿಗೆ ಕಾರ್ಯಕ್ರಮ ಅಧಿಕಾರಿಗೆ ಸಲ್ಲಿಸಬೇಕು. ಕಾರ್ಯಕ್ರಮ ಅಧಿಕಾರಿಯು ನಿರುದ್ಯೋಗ ಭತ್ಯೆ ಅರ್ಜಿಗಳನ್ನು ಪರಿಶೀಲಿಸಿ ಅರ್ಹರಿಲ್ಲದವರ ಅರ್ಜಿ ತಿರಸ್ಕರಿಸಿ ಹಿಂಬರಹ ನೀಡಬೇಕು. ಅರ್ಹರಿದ್ದಲ್ಲಿ ನಿರುದ್ಯೋಗ ಭತ್ಯೆಯನ್ನು ಮಂಜೂರು ಮಾಡಬೇಕು. ಅರ್ಜಿದಾರರು ಆರ್ಥಿಕ ವರ್ಷದ ಮೊದಲ ೩೦ ದಿನಗಳಿಗೆ ಕನಿಷ್ಠ ಕೂಲಿಯ ಶೇ.೨೫ ರಷ್ಟು ಮತ್ತು ಉಳಿದ ಅವಧಿಗೆ ಕನಿಷ್ಠ ಕೂಲಿಯ ಶೇ. ೫೦ ರಷ್ಟನ್ನು ನಿರುದ್ಯೋಗ ಭತ್ಯೆಯಾಗಿ ಪಡೆಯಲು ಹಕ್ಕುಳ್ಳವರಾಗಿರುತ್ತಾರೆ.

**ಕಾಮಗಾರಿಗಳ ಮುಕ್ತಾಯ ಹಾಗೂ ನಿರ್ವಹಣೆ**

ಪ್ರತಿ ಗ್ರಾಮ ಪಂಚಾಯಿತಿ ಮತ್ತು ಪ್ರತಿ ಕಾರ್ಯನಿರ್ವಹಣಾ ಏಜೆನ್ಸಿಗಳು ಮಂಜೂರಾದ, ಅನುಷ್ಠಾನಗೊಳಿಸಿದ ಮತ್ತು ಮುಕ್ತಾಯಗೊಂಡ ಕಾಮಗಾರಿಗಳ ವಿವರಗಳನ್ನು ವಹಿಯಲ್ಲಿ ದಾಖಲಿಸಿ ನಿರ್ವಹಿಸಬೇಕು. ಮುಕ್ತಾಯವಾದ ವರದಿಯೊಂದಿಗೆ ಕಾರ್ಯನಿರ್ವಹಣಾ ಏಜೆನ್ಸಿ ಕಾಮಗಾರಿಯನ್ನು ಅಂತಿಮಗೊಳಿಸಬೇಕು.

**ಜಾಗೃತಿ ಮತ್ತು ಗುಣ ನಿಯಂತ್ರಣ**

ಉದ್ಯೋಗ ಖಾತರಿ ಯೋಜನೆಯ ಅನುಷ್ಠಾನದ ಮೇಲ್ವಿಚಾರಣೆ ಮಾಡಲು ಸ್ವತಂತ್ರವಾದ ಜಾಗೃತಿ ಮತ್ತು ಗುಣ ನಿಯಂತ್ರಣ ತಂಡಗಳನ್ನು ರಚಿಸಲು ಅವಕಾಶವಿರುತ್ತದೆ. ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ ಪ್ರಕರಣ ೬೧ (ಎ) ಅಡಿಯಲ್ಲಿ ಪ್ರತಿ ಗ್ರಾಮಕ್ಕೆ ರಚಿಸಲಾಗಿರುವ ಗ್ರಾಮ ನೀರು ಮತ್ತು ನೈರ್ಮಲ್ಯ ಸಮಿತಿ ಈ ಯೋಜನೆಯಡಿಯಲ್ಲಿ ಜಾಗೃತಿ ಮತ್ತು ಉಸ್ತುವಾರಿ ಸಮಿತಿಯಾಗಿಯೂ ಕಾರ್ಯ ನಿರ್ವಹಿಸಬಹುದು.

**ಮೇಲ್ವಿಚಾರಣೆ ಮತ್ತು ಮೌಲ್ಯಮಾಪನ**

ಶೇ. ೧೦೦ ರಷ್ಟು ಕಾಮಗಾರಿಗಳನ್ನು ತಾಲ್ಲೂಕು ಮಟ್ಟದ ಅಧಿಕಾರಿಗಳು ಕನಿಷ್ಠ ಶೇ. ೧೦ ರಷ್ಟು ಕಾಮಗಾರಿಗಳನ್ನು ಜಿಲ್ಲಾ ಮಟ್ಟದ ಅಧಿಕಾರಿಗಳು, ಕನಿಷ್ಠ ಶೇ.೨ ರಷ್ಟು ಕಾಮಗಾರಿಗಳನ್ನು ರಾಜ್ಯ ಮಟ್ಟದ ಅಧಿಕಾರಿಗಳು ತಪಾಸಣೆ ಮಾಡಬೇಕು. ಯೋಜನೆಯ ಸಮರ್ಪಕ ಅನುಷ್ಠಾನದ ಮೇಲ್ವಿಚಾರಣೆಗಾಗಿ ರಾಜ್ಯ ಮಟದ ಹಿರಿಯ ಅಧಿಕಾರಿಯನ್ನು ಪ್ರತಿ ಜಿಲ್ಲೆಗೆ ರಾಜ್ಯ ಸರ್ಕಾರ ನೇಮಿಸುತ್ತದೆ. ಉಸ್ತುವಾರಿ ಮಾಹಿತಿ ವ್ಯವಸ್ಥೆಯ ನಮೂನೆಯನ್ನು ಗ್ರಾಮ ಪಂಚಾಯಿತಿ ಕಾರ್ಯದರ್ಶಿ ಭರ್ತಿ ಮಾಡಿ ಕಾರ್ಯಕ್ರಮ ಅಧಿಕಾರಿಗೆ ಕಳುಹಿಸಬೇಕು. ಗ್ರಾಮ ಪಂಚಾಯಿತಿಯಿಂದ ಬಂದ ಮಾಹಿತಿಗಳನ್ನು ಕಾರ್ಯಕ್ರಮ ಅಧಿಕಾರಿ ಕ್ರೋಡಿಕರಿಸಿ ವಿಶ್ಲೇಷಣೆ ಮಾಡಿ, ಸೂಕ್ತ ಪರಿಹಾರಗಳನ್ನು ತೆಗೆದುಕೊಂಡು ತನ್ನ ಷರಾದೊಂದಿಗೆ ವರದಿಗಳನ್ನು ಪ್ರತಿ ತಿಂಗಳೂ ಜಿಲ್ಲಾ ಕಾರ್ಯಕ್ರಮ ಸಮನ್ವಯಾಧಿಕಾರಿಗೆ ಸಲ್ಲಿಸಬೆಕು. ಜಿಲ್ಲಾ ಕಾರ್ಯಕ್ರಮ ಸಮನ್ವಯಾಧಿಕಾರಿಯು ಕಾರ್ಯಕ್ರಮ ಸಮನ್ವಯಾಧಿಕಾರಿಗೆ ಪ್ರತಿ ತಿಂಗಳು ಸಲ್ಲಿಸಬೇಕು.

**ಕುಂದು – ಕೊರತೆಗಳ ನಿವಾರಣಾ ವ್ಯವಸ್ಥೆ**

ಜಿಲ್ಲಾ ಕಾರ್ಯಕ್ರಮ ಸಮನ್ವಯಾಧಿಕಾರಿ ಜಿಲ್ಲಾ ಮಟ್ಟದಲ್ಲಿ ಕಾರ್ಯಕ್ರಮಾಧಿಕಾರಿ ತಾಲ್ಲೂಕು ಮಟ್ಟದಲ್ಲಿ ಗ್ರಾಮ ಪಂಚಾಯತಿ ಕಾರ್ಯದರ್ಶಿ ಗ್ರಾಮ ಪಂಚಾಯಿತಿ ಮಟ್ಟದಲ್ಲಿ ತಮಗೆ ಬಂದಂತಹ ದೂರುಗಳನ್ನು ಒಂದು ವಾರದೊಳಗೆ ವಿಚಾರಣೆಗೆ ಕ್ರಮ ಪ್ರಾರಂಭಿಸಬೇಕು ದೂರು/ವರದಿ ಸ್ವೀಕರಿಸಿದ್ದಕ್ಕೆ ಮತ್ತು ಅವುಗಳ ಮೇಲೆ ತೆಗೆದುಕೊಮಡ ಕ್ರಮಗಳ ಬಗ್ಗೆ ವಿವರಗಳನ್ನು ಪ್ರತಿ ಹಂತದಲ್ಲಿ ನಿರ್ವಹಿಸಲಾದ ಕುಂದುಕೊರತೆಗಳ ವಹಿಯಲ್ಲಿ ದಾಖಲಿಸಬೇಕು.

**ಕಾಮಗಾರಿಗಳ ಆಯ್ಕೆ**

ದುಡಿಯುವ ಕೈಗಳಿಗೆ ಉದ್ಯೋಗ ಒದಗಿಸುವ ಮೂಲಕ ಆರ್ಥಿಕ ಮತ್ತು ಸಾಮಾಜಿಕ ಅಸಮಾನತೆಯನ್ನು ಹೋಗಲಾಡಿಸುವ ಉದ್ದೇಶದಿಂದ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯನ್ನು ರಾಷ್ಟ್ರದಲ್ಲಿ ಅನುಷ್ಠಾನಕ್ಕೆ ತರಲಾಗಿದೆ. ಈ ಯೋಜನೆಯಡಿಯಲ್ಲಿ ಅನುಷ್ಠಾನಗೊಳಿಸುವ ಕಾಮಗಾರಿಗಳು ಸುಸ್ಥಿರ ಅಭಿವೃದ್ಧಿಗೆ ಪೂರಕವಾಗಿದ್ದು, ಈ ಕಾರಣದಿಂದಲೇ ಕಾಯಿದೆಯನ್ನು ರೂಪಿಸುವ ಸಂದರ್ಭದಲ್ಲೇ ಎಚ್ಚರಿಕೆಯನ್ನು ವಹಿಸಲಾಗಿದ್ದು, ಅಂತಹ ಆದ್ಯತೆಗಳನ್ನೇ ಅನುಷ್ಠಾನಕ್ಕಾಗಿ ಗುರುತಿಸಲಾಗಿದೆ. ಒಟ್ಟು ೯ ಆಧ್ಯತೆಗಳನ್ನು ಉದ್ಯೋಗ ಸೃಷ್ಟಿಗಾಗಿ ಗುರುತಿಸಲಾಗಿದ್ದು, ಈ ಆಧ್ಯತೆಗಳಲ್ಲಿ ಜನಸಹಭಾಗಿತ್ವದ ಮೂಲಕ ಕಾಮಗಾರಿಗಳನ್ನು ಆಯ್ಕೆ ಮಾಡಿಕೊಂಡು ಪರಿಪೂರ್ಣವಾದ ಯೋಜನೆಗಳನ್ನು ಸಿದ್ದಪಡಿಸಿ ಅನುಷ್ಠಾನಗೊಳಿಸಿದಲ್ಲಿ ಗ್ರಾಮೀಣ ಬಡತನ ನಿವಾರಣೆಯ ದಾರಿ ಸುಗಮವಾಗುವುದರಲ್ಲಿ ಸಂದೇಹವಿಲ್ಲ. ಕಾಯಿದೆಯಲ್ಲಿ ಸೂಚಿಸಲಾಗಿರುವ ಈ ೯ ಆಧ್ಯತೆಗಳಲ್ಲಿ ಯಾವೆಲ್ಲಾ ರೀತಿಯ ಕಾಮಗಾರಿಗಳನ್ನು ಕೈಗೆತ್ತಿಕೊಳ್ಳಬಹುದು ಎಂಬುದನ್ನು ಇಲ್ಲಿ ಚರ್ಚಿಸಲಾಗಿದೆ.

**೧. ಜಲ ಸಂರಕ್ಷಣೆ ಮತ್ತು ಮಳೆ ನೀರು ಕೊಯ್ಲು.**

ಅಂತರ್ಜಲ ಮಟ್ಟ ದಿನೇ ದಿನೇ ಕುಸಿಯುತ್ತಾ ಕುಡಿಯುವ ನೀರು ಮತ್ತು ಕೃಷಿ ಚಟುವಟಿಕೆಗಳಿಗೆ ನೀರಿನ ಕೊರತೆ ಭಯಾನಕವಾಗಿ ಹೆಚ್ಚುತ್ತಿರುವ ಇಂದಿನ ಸಂದರ್ಭದಲ್ಲಿ ಜಲಸಂರಕ್ಷಣೆ ಮತ್ತು ಮಳೆ ನೀರು ಕೊಯ್ಲು ಕಾಮಗಾರಿಗಳಿಗೆ ಮೊದಲ ಆದ್ಯತೆ ನೀಡಲಾಗಿದೆ. ಕೆರೆ, ತಡೆ, ಅಣೆಕಟ್ಟು, ಜಿನುಗುಕೆರೆ, ಕುಂಟೆ, ಗೋಕಟ್ಟೆ, ತಿರುವು ಕಾಲುವೆ, ಕಾಂಟೂರ್, ಬಂಡಿಂಗ್, ಶಾಲೋವಲ್, ನಿರ್ಮಾಣ ಹಾಗೂ ಶಾಲೆಗಳಲ್ಲಿ ಮತ್ತು ಮನೆಗಳಲ್ಲಿ ನೀರು ಕೊಯ್ಲು, ಕಾಮಗಾರಿಗಳನ್ನು ಕೈಗೆತ್ತಿಕೊಳ್ಳಬಹುದು.

೨. ಬರಗಾಲ ತಡೆಗಟ್ಟುವಿಕೆ

ಕೆರೆಗಳು, ಒಡ್ಡುಗಳು ಮತ್ತು ಕಾಲುವೆಗಳ ಏರಿಗಳು, ಸರ್ಕಾರಿ ಖಾಲಿ ಸ್ಥಳಗಳು, ಗೋಮಾಳ, ರಸ್ತೆ ಬದಿ, ಇತ್ಯಾದಿ ಸ್ಥಳಗಳಲ್ಲಿ ಗಿಡಗಳನ್ನು ಬೆಳೆಸುವುದು, ಪಂಚಾಯಿತಿ ವ್ಯಾಪ್ತಿಯಲ್ಲಿ ಖಾಲಿ ಸರ್ಕಾರಿ ಜಮೀನನ್ನು ಗುರುತಿಸಿ ಸಾಮಾಜಿಕ ಅರಣ್ಯ ಬೆಳೆಸುವುದು, ಸಾಮಾಜಿಕ ಅರಣ್ಯ ಬೆಳೆಸಲು ಮತ್ತು ಜನರಲ್ಲಿ ಗಿಡ ನೆಡುವ ಮನೋಭಾವವನ್ನು ಮೂಡಿಸುವ ನಿಟ್ಟಿನಲ್ಲಿ ಪ್ರಾಯೋಗಿಕವಾಗಿ ನರ್ಸರಿಗಳನ್ನು ಆರಂಭಿಸುವುದು. ಅರಣ್ಯೀಕರಣಕ್ಕೆ ಹೆಚ್ಚಿನ ಮೊತ್ತವನ್ನು ವಿನಿಯೋಗಿಸುವ ದೃಷ್ಟಿಯಿಂದ, ಪಂಚಾಯಿತಿಯಲ್ಲಿ ಒಂದು ಆರ್ಥಿಕ ವರ್ಷದಲ್ಲಿ ತೆಗೆದುಕೊಳ್ಳುವ ಎಲ್ಲಾ ಕಾಮಗಾರಿಗಳಿಗೆ ವಿನಿಯೋಗಿಸುವ ಮೊತ್ತದ ಕನಿಷ್ಠ ಶೇ.೨೦ ಕ್ಕೆ ಕಡಿಮೆ ಇಲ್ಲದಂತೆ ಅರಣ್ಯೀಕರಣಕ್ಕೆ ವಿನಿಯೋಗಿಸಬೇಕು.

೩. ನೀರಾವರಿ

ಹೊಸ ನೀರಾವರಿ ಕಾಲುವೆಗಳು, ಪೂರಕ ನಾಲೆಗಳು, ಕ್ಷೇತ್ರ ಕಾಲುವೆಗಳ ದುರಸ್ತಿ ಮತ್ತು ನಿರ್ಮಾಣದ ಕಾಮಗಾರಿಗಳನ್ನು ತೆಗೆದುಕೊಳ್ಳಬಹುದು.

೪. ನೀರಾವರಿ ಸೌಲಭ್ಯ

ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಠ ಪಂಗಡಗಳಿಗೆ ಸೇರಿದ ಕುಟುಂಬಗಳ ಒಡೆತನದ ಭೂ ಸುಧಾರಣಾ ಫಲಾನುಭವಿಗಳ, ಭಾರತ ಸರ್ಕಾರದ ಇಂದಿರಾ ಅವಾಸ್ ಯೋಜನೆ ಫಲಾನುಭವಿಗಳ ಹಾಗೂ ಬಡತನ ರೇಖೆಗಿಂತ ಕೆಳಗಿರುವ ಕುಟುಂಬಗಳ ಜಮೀನಿನಲ್ಲಿ ನೀರಾವರಿ ಸೌಲಭ್ಯ ಒದಗಿಸುವುದು.

೫. ನೀರಿನ ಮೂಲಗಳ ಪುನಶ್ಚೇತನ

ಹಳೇ ಕೆರೆಗಳ ಪುನಶ್ಚೇತನ, ಸಮುದಾಯದ ಕುಡಿಯುವ ನೀರಿನ ಬಾವಿಗಳ ಪುನಶ್ಚೇತನ, ಕಲ್ಯಾಣಿ, ಹೊಂಡಗಳು, ಗೋಕಟ್ಟೆಯಂತಹ ಸಾಂಪ್ರದಾಯಿಕ ನೀರು ಸಂಚಯಗಳ ಪುನಶ್ಚೇತನ ಮತ್ತು ಕೆರೆಗಳ ಹೂಳು ತೆಗೆಯುವುದು.

**೬. ಜಮೀನಿನ ಅಭಿವೃದ್ಧಿ**

ಆರ್ಥಿಕವಾಗಿ ಹಿಂದುಳಿದ ವರ್ಗದ ಜನರಿಗಾಗಿ ಕೇಂದ್ರ/ರಾಜ್ಯ ಗ್ರಾಮೀಣ ವಸತಿ ನಿರ್ಮಾಣ ಯೋಜನೆಗಳ ಫಲಾನುಭವಿಗಳ ಬಡಾವಣೆ, ಗ್ರಾಮೀಣ ಪ್ರದೇಶದ ಸರ್ಕಾರಿ ಶಾಲಾ/ಕಾಲೇಜುಗಳ ಆಟದ ಮೈದಾನ ಅಭಿವೃದ್ಧಿ, ಸರ್ಕಾರಿ ತೋಟಗಾರಿಕಾ ಫಾರ್ಮ್‌ಗಳು, ಕೃಷಿ ಫಾರಂಗಳು, ಮೀನು ಸಾಕಾಣಿಕಾ ಕೇಂದ್ರಗಳು, ಮೇವು ಬೆಳೆಯುವ ಕೇಂದ್ರಗಳು, ರೇಷ್ಮೆ ಬೆಳೆ ಕೇಂದ್ರಗಳಿಗಾಗಿ ಭೂಮಿಯ ಅಭಿವೃದ್ಧಿ, ರೈತ ಸಂತೆಗಳು ಇತ್ಯಾದಿಗಳಿಗಾಗಿ ಭೂಮಿಯನ್ನು ಅಭಿವೃದ್ಧಿಪಡಿಸುವುದು.

**೭. ನೆರೆ (ಪ್ರವಾಹ) ನಿಯಂತ್ರಣ ಮತ್ತು ತಡೆ**

ತಗ್ಗು ಪ್ರದೇಶಗಳಿಗೆ ನೆರೆ(ಪ್ರವಾಹದ) ನೀರು ನುಗ್ಗದಂತೆ ತಡೆಗೋಡೆಗಳನ್ನು ನಿರ್ಮಿಸುವುದು ನೆರೆ(ಪ್ರವಾಹ)ಯಿಂದಾಗಿ ಮಣ್ಣಿನ ಕೊರೆತ ನಿಲ್ಲಿಸಲು ತಡೆಗಳ ನಿರ್ಮಾಣ ಚೌಗು ಪ್ರದೇಶಗಳಲ್ಲಿ ನೀರನ್ನು ಹೊರ ಹಾಕಲು (ಬಸಿಯಲಿ ಚರಂಡಿ ನಿರ್ಮಾಣ).

**೮. ಸರ್ವಋತು ಗ್ರಾಮೀಣ ರಸ್ತೆ ನಿರ್ಮಾಣ**

ಈ ಯೋಜನೆಯಡಿಯಲ್ಲಿ ರಸ್ತೆ ಕಾಮಗಾರಿಗೆ ಕೊನೆಯ ಆದ್ಯತೆ ನೀಡಲಾಗಿದೆ. ಕೈಗೊಳ್ಳುವ ರಸ್ತೆ ಕಾಮಗಾರಿಗಳು ಎಲ್ಲಾ ರೀತಿಯ ಋತುಮಾನಗಳಲ್ಲೂ ಉಪಯೋಗಿಸುವಂತಿರಬೇಕು. ಕೃಷಿ ಚಟುವಟಿಕೆಗಳಿಗಾಗಿ ರೈತರು ತಮ್ಮ ಜಮೀನುಗಳಿಗೆ ಹೋಗುವ ರಸ್ತೆಯನ್ನು ಹಾಗೂ ಕೃಷಿಕರು ತಾವು ಬೆಳೆದ ಕೃಷಿ ಉತ್ಪನ್ನಗಳನ್ನು ಮಾರುಕಟ್ಟೆ/ಸಂತೆಗಳಿಗೆ ಸಾಗಿಸುವ ರಸ್ತೆಗಳನ್ನು ಅಭಿವೃದ್ಧಿಪಡಿಸಬಹುದಾಗಿದೆ.

**೯. ಕೇಂದ್ರ ಸರ್ಕಾರ ಸೂಚಿಸುವ ಕಾಮಗಾರಿಗಳು**

ವಿಶೇಷ ಸಂದರ್ಭಗಳಲ್ಲಿ ಕೆಲವು ಕಾಮಗಾರಿಗಳು ಅಗತ್ಯವೆನಿಸಿದರೆ ಅಂತಹ ಸಂದರ್ಭಗಳಲ್ಲಿ ಕೇಂದ್ರ ಸರ್ಕಾರವು ರಾಜ್ಯ ಸರ್ಕಾರದೊಂದಿಗೆ ಸಮಾಲೋಚಿಸಿ ಕೇಂದ್ರ ಸರ್ಕಾರ ಅಧಿಸೂಚಿಸುವ ಇತರೆ ಯಾವುದೇ ಕಾಮಗಾರಿಗಳನ್ನು ತೆಗೆದುಕೊಳ್ಳಬಹುದಾಗಿದೆ.

**ಆಡಳಿತಾತ್ಮಕ ಮತ್ತು ತಾಂತ್ರಿಕ ಮಂಜೂರಾತಿ**

ಗ್ರಾಮ ಪಂಚಾಯಿತಿ, ತಾಲ್ಲೂಕು ಪಂಚಾಯಿತಿ ಮತ್ತು ಜಿಲ್ಲಾ ಪಂಚಾಯಿತಿಗಳು ತಯಾರಿಸಿದ ಕಾಮಗಾರಿಗಳ ಯಾದಿಗೆ (ಪಟ್ಟಿ) ಜಿಲ್ಲಾ ಪಂಚಾಯಿತಿಯ ಸಾಮಾನ್ಯ ಸಭೆಯ ಅನುಮೋದನೆ ಪಡೆದ ನಂತರ ಜಿಲ್ಲಾ ಕಾರ್ಯಕ್ರಮ ಸಮನ್ವಯ ಅಧಿಕಾರಿಯು ಕ್ರೋಢೀಕೃತ ಕಾಮಗಾರಿಗಳ ಯಾದಿಗೆ ಆಡಳಿತಾತ್ಮಕ ಮಂಜೂರಾತಿಯನ್ನು ನೀಡಬೇಕು. ನಂತರದಲ್ಲಿ ಪ್ರತಿಯೊಂದು ಕಾಮಗಾರಿಗೂ ಪ್ರತ್ಯೇಕ ಕ್ರಮ ಸಂಖ್ಯೆಯನ್ನು ಆದ್ಯತೆ ಆಧಾರದಲ್ಲಿಯೇ ನೀಡಿ ಮುಂದಿನ ಕ್ರಮಕ್ಕಾಗಿ ಕಾರ್ಯಕ್ರಮಅಧಿಕಾರಿಗೆ (ಕಾರ್ಯನಿರ್ವಾಹಕಅಧಿಕಾರಿ) ಕಳುಹಿಸಿಕೊಡುತ್ತಾರೆ. ತದನಂತರದಲ್ಲಿ ಕಾರ್ಯಕ್ರಮ ಅಧಿಕಾರಿಯು ಆಡಳಿತಾತ್ಮಕ ಅನುಮೋದನೆ ಪಡೆದ ಕಾಮಗಾರಿಗಳ ಯಾದಿಯನ್ನು ಕಳುಹಿಸಿ, ಅನುಮೋದಿತ ಎಲ್ಲಾ ಕಾಮಗಾರಿಗಳಿಗೂ ಅಂದಾಜು ಪಟ್ಟಿ ತಯಾರಿಸಿ ತಾಂತ್ರಿಕ ಮಂಜೂರಾತಿ ಪಡೆಯಲು ಆಯಾಮ ಗ್ರಾಮ ಪಂಚಾಯತಿಗಳಿಗೆ ಕಳುಹಿಸಿಕೊಡಬೇಕು.

ಆ ಕಾರ್ಯಕ್ರಮ ಅಧಿಕಾರಿಯಿಂದ ಸ್ವೀಕರಿಸಿದ ಆಡಳಿತಾತ್ಮಕ ಮಂಜೂರಾತಿ ಪಡೆದ ಕಾಮಗಾರಿಗಳ ಯಾದಿಯನ್ನು ಸಂಬಂಧಪಟ್ಟ ಇಲಾಖೆಗಳಿಗೆ ಕಳುಹಿಸಿ, ವಿವರವಾದ ಅಂದಾಜುಪಟ್ಟಿ ತಯಾರಿಸಿ ತಾಂತ್ರಿಕ ಮಂಜೂರಾತಿ ಪಡೆದು ಪ್ರತಿಯೊಂದನ್ನು ಗ್ರಾಮ ಪಂಚಾಯಿತಿಗೆ ಸಲ್ಲಿಸಲು ಗ್ರಾಮ ಪಂಚಾಯಿತಿ ಕಾರ್ಯದರ್ಶಿಯು ತಿಳಿಸಬೇಕು. ಎಲ್ಲಾ ಇಲಾಖೆಗಳಿಂದ ತಾಂತ್ರಿಕ ಮಂಜೂರಾತಿ ಪಡೆದು ಬಂದ ಅಂದಾಜು ಪಟ್ಟಿಗಳನ್ನು ಕಾಮಗಾರಿಗಳ ಯಾದಿಯನ್ನಾಗಿ ಅನುಷ್ಠಾನಕ್ಕೆ ಗ್ರಾಮ ಪಂಚಾಯತಿಯು ಉಪಯೋಗಿಸಬೇಕು.

**ಹಣಕಾಸು ನಿರ್ವಹಣೆ**

ಯಾವುದೇ ಯೋಜನೆಯನ್ನು ಯಶಸ್ವಿಯಾಗಿ ಅನುಷ್ಠಾನಗೊಳಿಸಬೇಕಾದಲ್ಲಿ ಆ ಯೋಜನೆಯಲ್ಲಿ ತೊಡಗಿಸಲಾದ ಹಣಕಾಸಿನ ಸಮರ್ಪಕ ನಿರ್ವಹಣೆ ಅತ್ಯಂತ ಪ್ರಮುಖ ಪಾತ್ರ ವಹಿಸುತ್ತದೆ. ಹಣಕಾಸಿನ ನಿರ್ವಹಣೆಯಲ್ಲಿ ಲೋಪ ಉಂಟಾದಾಗ ಯೋಜನೆಯ ಆಶಯಗಳು ಪೂರ್ಣ ಪ್ರಮಾಣದಲ್ಲಿ ಫಲಿಸುವುದಿಲ್ಲ. ಸರ್ಕಾರವು ಜಾರಿಗೊಳಿಸಿರುವ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯ ಅನುಷ್ಠಾನ ಪ್ರಕ್ರಿಯೆಯಲ್ಲಿ ಹಣಕಾಸಿಗೆ ಸಂಬಂಧಿಸಿದ ಲೆಕ್ಕಪತ್ರಗಳ ನಿರ್ವಹಣೆ ಹಾಗೂ ಅನುಸರಿಸಬೇಕಾದ ನಿಯಮಾವಳಿಗಳ ಬಗ್ಗೆ ವಿಶೇಷ ಗಮನಹರಿಸಬೇಕಾಗಿದೆ.

**೧. ಅನುದಾನ**

ಯೋಜನೆಯ ಅನುಷ್ಠಾನಕ್ಕೆ ಬೇಕಾಗುವ ಅನುದಾನದ ಶೇ. ೯೦ ರಷ್ಟನ್ನು ಕೇಂದ್ರ ಸರ್ಕಾರವು ಹಾಗೂ ಉಳಿದ ಶೇ.೧೦ರಷ್ಟನ್ನು ರಾಜ್ಯ ಸರ್ಕಾರವು ಒದಗಿಸುತ್ತದೆ.

**೨. ಕೇಂದ್ರ ಸರ್ಕಾರದ ಅನುದಾನದಿಂದ ಭರಿಸಲಾಗುವ ವೆಚ್ಚ**

**೨.೧. ಅಕುಶಲ ಕೂಲಿ ವೆಚ್ಚ**

ಯೋಜನಾ ಕಾಮಗಾರಿಗಳಲ್ಲಿ ಪಾಲ್ಗೊಳ್ಳುವ ಅಕುಶಲ ಕಾರ್ಮಿಕರ ಕೂಲಿ ವೆಚ್ಚದ ಶೇ.೧೦೦ ರಷ್ಟನ್ನು ಕೇಂದ್ರ ಸರ್ಕಾರದ ಅನುದಾನದಲ್ಲಿ ಭರಿಸಲಾಗುವುದು.

**೨.೨. ಸಾಮಗ್ರಿ ವೆಚ್ಚ**

ಈ ಶೀರ್ಷಿಕೆಯಲ್ಲಿ ಕೆಳಕಂಡ ಬಾಬ್ತುಗಳ ವೆಚ್ಚ ಸೇರಿದೆ.

೧. ಯೋಜನಾ ಅನುಷ್ಠಾನಕ್ಕೆ ಬೇಕಾದ ಸಾಮಗ್ರಿ

೨. ಕುಶಲ ಮತ್ತು ಅರೆ ಕುಶಲ ಕಾರ್ಮಿಕರ ಕೂಲಿ

೩. ಯಂತ್ರೋಪಕರಣಗಳ ವೆಚ್ಚ

ಕೇಂದ್ರ ಸರ್ಕಾರದ ಅನುದಾನದಲ್ಲಿ ಒಟ್ಟು ಸಾಮಗ್ರಿ ವೆಚ್ಚ ಶೇ. ೭೫ರಷ್ಟನ್ನು ಭರಿಸಲಾಗುವುದು.

**೨.೩. ಆಡಳಿತಾತ್ಮಕ ವೆಚ್ಚ**

ಈ ಶೀರ್ಷಿಕೆಯಲ್ಲಿ ಕೆಳಕಂಡ ಬಾಬ್ತುಗಳ ವೆಚ್ಚ ಸೇರಿದೆ.

**೨.೩.೧. ಮಾಹಿತಿ, ಶಿಕ್ಷಣ ಮತ್ತು ಸಂವಹನ**

ಇದರಲ್ಲಿ ಯೋಜನೆಯ ಬಗ್ಗೆ ಸಾರ್ವಜನಿಕರಲ್ಲಿ ಅರಿವು ಮೂಡಿಸುವಂತಹ ಎಲ್ಲಾ ಕಾರ್ಯಗಳು ಸೇರಿವೆ.

ಉದಾ : ಕರಪತ್ರ ಮುದ್ರಣ, ಬ್ಯಾನರ್‌ಗಳು, ಗೋಡೆ ಬರಹಗಳು, ರೇಡಿಯೋ, ದೂರದರ್ಶನ, ವೃತ್ತ ಪತ್ರಿಕೆಗಳು ಹಾಗೂ ಇತರೆ ಮಾಧ್ಯಮಗಳ ಮೂಲಕ ಪ್ರಚಾರ ಬೀದಿ ನಾಟಕಗಳು ಇತ್ಯಾದಿ.

**೨.೩.೨. ಮಾಹಿತಿ ನಿರ್ವಹಣೆ ಮತ್ತು ಕಾರ್ಯಾಚರಣೆ**

ಯೋಜನೆಯ ಅನುಷ್ಠಾನಕ್ಕೆ ಸಂಬಂಧಿಸಿದ ಎಲ್ಲಾ ಪ್ರಕ್ರಿಯೆಗಳ ಪೂರ್ಣ ಮಾಹಿತಿಯನ್ನು ವಿವಿಧ ಏಜೆನ್ಸಿಗಳಿಂದ ಪಡೆದು ಕ್ರೋಢಿಕರಿಸಿ ಸಕ್ಷಮ ಅಧಿಕಾರಿಗಳಿಗೆ ಸಲ್ಲಿಸಲಾಗುವುದು. ಇದಕ್ಕೆ ಪೂರಕವಾಗಿ ಬೇಕಾದ ಗಣಕಯಂತ್ರ, ತಂತ್ರಾಂಶಗಳು, ಇತ್ಯಾದಿಗಳಿಗೆ ಸಂಬಂಧಿಸಿದ ವೆಚ್ಚವನ್ನು ಈ ಶೀರ್ಷಿಕೆಯಲ್ಲಿ ಭರಿಸಲಾಗುವುದು.

**೨.೩.೩. ಸಿಬ್ಬಂದಿಯ ವೆಚ್ಚ**

ಯೋಜನೆಯ ಅನುಷ್ಠಾನಕ್ಕೆ ಬೇಕಾದ ಕೆಳಕಂಡ ಸಿಬ್ಬಂದಿಯನ್ನು ನೇಮಿಸಿಕೊಳ್ಳಲು ಅವಕಾಶವಿದೆ. ಇವರುಗಳಿಗೆ ಪಾವತಿಸುವ ವೇತನದ ಮೊಬಲಗನ್ನು ಪೂರ್ಣವಾಗಿ ಕೇಂದ್ರ ಸರ್ಕಾರದ ಅನುದಾನದಲ್ಲಿ ಭರಿಸಬಹುದಾಗಿದೆ.

**೧. ಗ್ರಾಮ ಅಭಿವೃದ್ಧಿ ಸಹಾಯಕರು**

ಇವರು ಗ್ರಾಮ ಪಂಚಾಯಿತಿಯ ಕಾರ್ಯದರ್ಶಿಗೆ ಯೋಜನೆಯ ಅನುಷ್ಠಾನದ ಎಲ್ಲಾ ಪ್ರಕ್ರಿಯೆಗಳಲ್ಲಿ ಸಹಾಯ ಮಾಡುವರು. ಉದಾ : ಕುಟುಂಬ ನೋಂದಣಿ, ಉದ್ಯೋಗಕ್ಕಾಗಿ ಅರ್ಜಿ ಸ್ವೀಕಾರ, ಕಾಮಗಾರಿಗಳ ಹಂಚಿಕೆ, ಎನ್.ಎಂ.ಆರ್.ವಿತರಣೆ, ಕಾಮಗಾರಿ ಸ್ಥಳ ಪರಿಶೀಲನೆ, ಸಂಬಂಧಿತ ವಹಿಗಳ ನಿರ್ವಹಣೆ ಇತ್ಯಾದಿ.

**೨. ಇಂಜಿನಿಯರ್**

ಯೋಜನೆಯ ಕಾಮಗಾರಿಗಳ ಅಂದಾಜು ಪಟ್ಟಿ ತಯಾರಿಸುವುದು. ಕಾಮಗಾರಿಗಳ ಉಸ್ತುವಾರಿ ಇತ್ಯಾದಿ ಕೆಲಸಗಳಿಗೆ ಇಲಾಖಾ ಇಂಜಿನಿಯರುಗಳಿಗೆ ಸಹಾಯ ಮಾಡಲು ಇಂಜಿನಿಯರ್‌ಗಳ ಸೇವೆಯನ್ನು ಖಾಸಗಿಯಾಗಿ ಪಡೆಯಬಹುದಾಗಿದೆ.

**೪ ಸಹಾಯಕ ಕಾರ್ಯಕ್ರಮ ಅಧಿಕಾರಿ**

ತಾಲ್ಲೂಕು ಪಂಚಾಯಿತಿಯ ಕಾರ್ಯನಿರ್ವಾಹಕ ಅಧಿಕಾರಿ ಈ ಯೋಜನೆಯ ಕಾರ್ಯಕ್ರಮ ಅಧಿಕಾರಿಯಾಗಿರುತ್ತಾರೆ. ಇವರು ಸಂಬಂಧಿತ ತಾಲ್ಲೂಕಿನಲ್ಲಿನ ಯೋಜನೆಯ ಸಮರ್ಪಕ ಅನುಷ್ಠಾನದ

ಎಲ್ಲಾ ಪ್ರಕ್ರಿಯೆಗಳ ಮೇಲುಸ್ತುವಾರಿ ನೋಡಿಕೊಳ್ಳುವ ಅತ್ಯಂತ ಗುರುತರವಾದ ಜವಾಬ್ದಾರಿಯನ್ನು ಹೊಂದಿರುತ್ತಾರೆ. ಈ ಕಾರ್ಯದಲ್ಲಿ ಇವರಿಗೆ ಸಹಾಯ ಮಾಡಲು ಸಹಾಯಕ ಕಾರ್ಯಕ್ರಮ ಅಧಿಕಾರಿಯೊಬ್ಬರನ್ನು ನೇಮಿಸಿಕೊಳ್ಳಬಹುದಾಗಿದೆ.

**೫. ಗಣಕಯಂತ್ರ ಮತ್ತು ಲೆಕ್ಕ ಪತ್ರ ಸಹಾಯಕ**

ಗ್ರಾಮ ಪಂಚಾಯಿತಿಗಳಲ್ಲಿ ಲೆಕ್ಕ ಪತ್ರ ನಿರ್ವಹಣೆಗೆ ಕಾರ್ಯದರ್ಶಿಯವರಿಗೆ ಸಹಾಯ ಮಾಡಲು ಲೆಕ್ಕ ಪತ್ರ ಸಹಾಯಕರುಗಳ ಸೇವೆಯನ್ನು ಪಡೆಯಬಹುದಾಗಿದೆ. ಇದೇ ರೀತಿ ಗಣಕಯಂತ್ರ ಸಹಾಯಕರ ಸೇವೆಯನ್ನು ಪಡೆಯಬಹುದಾಗಿದೆ.

**೬. ಸಾಮರ್ಥ್ಯ ಅಭಿವೃದ್ಧಿ**

ಯೋಜನೆಯ ಅನುಷ್ಠಾನದ ಪ್ರಕ್ರಿಯೆಯಲ್ಲಿ ಭಾಗವಹಿಸುವ ಎಲ್ಲಾ ಸಿಬ್ಬಂದಿಗೆ ಮತ್ತು ಜನಪ್ರತಿನಿಧಿಗಳಿಗೆ ಅವರುಗಳ ಸಾಮರ್ಥ್ಯವನ್ನು ವೃದ್ಧಿಗೊಳಿಸಿ ಯೋಜನೆಯ ಯಶಸ್ವಿ ಅನುಷ್ಠಾನಕ್ಕೆ ಪೂರಕವಾದ ತರಬೇತಿ ನೀಡಲಾಗುವುದು. ಈ ವೆಚ್ಚವನ್ನು ಕೇಂದ್ರ ಸರ್ಕಾರದ ಅನುದಾನದಿಂದ ಭರಿಸಲಾಗುವುದು.

**೨.೪. ಕೆಲಸದ ಸ್ಥಳದಲ್ಲಿ ಒದಗಿಸಬೇಕಾದ ಸೌಲಭ್ಯಗಳು**

ಕೇಂದ್ರದ ಅಧಿನಿಯಮದ ಪರಿಶಿಷ್ಟ – II ರಲ್ಲಿ ತಿಳಿಸಿರುವಂತೆ ಕೆಲಸದ ಸ್ಥಳದಲ್ಲಿ ಕಾರ್ಮಿಕರಿಗೆ ಕೆಳಕಂಡ ಸೌಲಭ್ಯ ಒದಗಿಸಬೇಕಾಗಿದೆ.

೧. ಕೆಲಸದಲ್ಲಿ ನಿರತನಾದ ಯಾವುದೇ ಕಾರ್ಮಿಕರಿಗೆ ಅಪಘಾತವಾದಲ್ಲಿ ಅದಕ್ಕೆ ಪೂರಕವಾದ ಚಿಕಿತ್ಸಾ ವೆಚ್ಚವನ್ನು ಉಚಿತವಾಗಿ ಒದಗಿಸಲಾಗುವುದು.

೨. ಅಪಘಾತಕ್ಕೆ ಒಳಗಾದ ಕಾರ್ಮಿಕರಿಗೆ ಆಸ್ಪತ್ರೆಯಲ್ಲಿ ಒಳರೋಗಿಯಾಗಿ ಚಿಕಿತ್ಸೆ ನೀಡಬೇಕಾದಂತಹ ಸಂದರ್ಭದಲ್ಲಿ ಉಚಿತವಾಗಿ ಅವಶ್ಯಕವಾದ ಔಷಧಿಗಳನ್ನು ನೀಡುವುದರೊಂದಿಗೆ ಕೆಲಸ ನಿರ್ವಹಿಸಿದ್ದಲ್ಲಿ ನೀಡಬೇಕಾಗಿದ್ದ ಕೂಲಿಯ ೧/೨ ದಷ್ಟು ಮೊತ್ತವನ್ನು ದಿನಭತ್ಯೆಯಾಗಿ ಪಾವತಿಸಬೇಕಾಗುವುದು.

೩. ಅಪಘಾತಕ್ಕೀಡಾದ ವ್ಯಕ್ತಿಗೆ ಶಾಶ್ವತ ಅಂಗವಿಕಲತೆ ಉಂಟಾದಲ್ಲಿ ಅಥವಾ ಮರಣ ಹೊಂದಿದಲ್ಲಿ ಆತನ ಕುಟುಂಬದವರಿಗೆ ೨೫,೦೦೦/–ರೂಪಾಯಿಗಳ ಪರಿಹಾರ ಮೊತ್ತವನ್ನು ನೀಡಬೇಕಾಗುವುದು.

೪. ಕೆಲಸದ ಸ್ಥಳದಲ್ಲಿ ಶುದ್ಧಕುಡಿಯುವನೀರು, ಪ್ರಥಮಚಿಕಿತಾ ಪೆಟ್ಟಿಗೆ ಒದಗಿಸಬೇಕಾಗುತ್ತದೆ. ಕೂಲಿಕಾರರ ಮಕ್ಕಳಿಗೆ ನೆರಳನ್ನು ಒದಗಿಸಬೇಕಾಗುತ್ತದೆ.

೫. ಕೆಲಸಕ್ಕೆ ಬರುವ ಕಾರ್ಮಿಕರ ಜೊತೆಯಲ್ಲಿ ಬರುವ ೬ ವರ್ಷ ಒಳಗಿನ ಮಕ್ಕಳ ಸಂಖ್ಯೆ ೫ ಕ್ಕಿಂತ ಹೆಚ್ಚಾಗಿದ್ದಲ್ಲಿ, ಕೆಲಸಕ್ಕೆ ಬಂದಂತಹ ಓರ್ವ ಮಹಿಳಾ ಕಾರ್ಮಿಕರನ್ನು ಮಕ್ಕಳ ಯೋಗಕ್ಷೇಮ ನೋಡಿಕೊಳ್ಳಲು ನೇಮಿಸಬೇಕು. ಇವರಿಗೆ ಕೆಲಸ ನಿರ್ವಹಿಸಿದಾಗ ಪಾವತಿಸುವ ದರದಲ್ಲಿ ಕೂಲಿಯನ್ನು ನೀಡಬೇಕು.

೬. ಕೆಲಸಕ್ಕೆ ಬಂದಂತಹ ಕಾರ್ಮಿಕರೊಡನೆ ಬಂದಿರುವ ಮಕ್ಕಳು ಅಪಘಾತದಕ್ಕೀಡಾದಲ್ಲಿ ಅವರಿಗೆ ಉಚಿತ ವೈದ್ಯಕೀಯ ಚಿಕಿತ್ಸೆ ಒದಗಿಸಬೇಕು.

೭. ಅಪಘಾತಕ್ಕೀಡಾದ ಮಕ್ಕಳು ಮರಣ ಹೊಂದಿದ್ದಲ್ಲಿ ಅಥವಾ ಶಾಶ್ವತ ಅಂಗವೈಕಲ್ಯ ಹೊಂದಿದ್ದಲ್ಲಿ ಅವರಿಗೂ ಸಹ ೨೫೦೦೦/– ರೂಪಾಯಿ ಪರಿಹಾರ ಧನವನ್ನು ನೀಡಬೇಕು.

ಮೇಲಿನ ಎಲ್ಲಾ ಸೌಲಭ್ಯಗಳಿಗೆ ಸಂಬಂಧಿಸಿದ ವೆಚ್ಚವನ್ನು ಕೇಂದ್ರ ಸರ್ಕಾರದ ಅನುದಾನದಿಂದ ಭರಿಸಲಾಗುವುದು.

### ೨.೫. ಯೋಜನೆ ತಯಾರಿಕೆ

ಯೋಜನೆಯನ್ನು ಸಿದ್ದಪಡಿಸಲು ತಗಲುವ ಎಲ್ಲಾ ವೆಚ್ಚವನ್ನು ಕೇಂದ್ರ ಸರ್ಕಾರದ ಅನುದಾನದಲ್ಲಿ ಭರಿಸಲಾಗುವುದು.

### ೨.೬. ಸಾಮಾಜಿಕ ಲೆಕ್ಕ ಪರಿಶೋದನೆ

ಸಾಮಾಜಿಕ ಲೆಕ್ಕ ಪರಿಶೋಧನೆಗೆ ಸಂಬಂಧಿಸಿದ ಎಲ್ಲಾ ವೆಚ್ಚವನ್ನು ಕೇಂದ್ರ ಸರ್ಕಾರದ ಅನುದಾನದಿಂದ ಭರಿಸಲಾಗುವುದು.

**೨.೭. ಕುಂದು ಕೊರತೆ ನಿವಾರಣೆ**

ಯೋಜನೆಯ ಅನುಷ್ಠಾನದ ಪ್ರಕ್ರಿಯೆಯಲ್ಲಿ, ಸಾರ್ವಜನಿಕರು ನೀಡಬಹುದಾದ ಎಲ್ಲಾ ದೂರುಗಳನ್ನು ಸ್ವೀಕರಿಸಿ, ಪರಿಶೀಲಿಸಿ, ಸರಿಪಡಿಸಲು ಸೂಕ್ತ ಕ್ರಮ ತೆಗೆದುಕೊಳ್ಳಲು ಅನುಕೂಲವಾಗುವಂತೆ ಕುಂದುಕೊರತೆ ನಿವಾರಣಾ ಸಮಿತಿಯನ್ನು ರಚಿಸಲಾಗುವುದು. ಇದಕ್ಕಾಗಿ ತಗಲುವ ಎಲ್ಲಾ ವೆಚ್ಚವನ್ನು ಕೇಂದ್ರ ಸರ್ಕಾರದ ಅನುದಾನದಿಂದ ಭರಿಸಲಾಗುವುದು.

**೩. ಕೇಂದ್ರ ಸರ್ಕಾರದ ಅನುದಾನದಿಂದ ಭರಿಸಲಾಗುವ ವೆಚ್ಚ**

ಕೇಂದ್ರ ಸರ್ಕಾರದ ಅನುದಾನದಿಂದ ಕೆಳಕಂಡ ಆಡಳಿತಾತ್ಮಕ ವೆಚ್ಚದ ಬಾಬ್ತುಗಳನ್ನು ಭರಿಸಲು ಅವಕಾಶವಿರುವುದಿಲ್ಲ.

೧. ಸರ್ಕಾರಿ ಸಿಬ್ಬಂದಿಗಳ ವೇತನ

೨. ಹೊಸ ವಾಹನಗಳ ಖರೀದಿ

೩. ಹಳೆ ವಾಹನಗಳ ರಿಪೇರಿ

೪. ಸಿವಿಲ್ ಕಾಮಗಾರಿಗಳು

೫. ರಾಜ್ಯ ಸರ್ಕಾರದ ಅನುದಾನದಿಂದ ಭರಿಸಲಾಗುವ ವೆಚ್ಚ

ಕೆಳಕಂಡ ಬಾಬ್ತುಗಳಿಗೆ ಸಂಬಂಧಿಸಿದ ವೆಚ್ಚವನ್ನು ರಾಜ್ಯ ಸರ್ಕಾರದ ಅನುದಾನದಿಂದ ಭರಿಸಲಾಗುವುದು.

೧. ಸಾಮಗ್ರಿಗಳ ವೆಚ್ಚ ಶೇ. ೨೫ ರಷ್ಟು.

೨. ಕುಶಲ ಮತ್ತು ಅರೆ ಕುಶಲ ಕಾರ್ಮಿಕರ ಕೂಲಿ

೩. ಯಂತ್ರೋಪಕರಣಗಳ ವೆಚ್ಚ

**ನಿರುದ್ಯೋಗ ಭತ್ಯೆ**

ರಾಜ್ಯ ಸರ್ಕಾರದ ಯೋಜನೆಯ ಕಂಡಿಕೆ ೩೩ ರಲ್ಲಿ ತಿಳಿಸಿದಂತೆ, ಪಾವತಿಸಲಾಗುವ ನಿರುದ್ಯೋಗ ಭತ್ಯೆಯ ಸಂಪೂರ್ಣ ವೆಚ್ಚವನ್ನು ರಾಜ್ಯ ಸರ್ಕಾರದ ಅನುದಾನದಿಂದ ಭರಿಸಬೇಕಾಗುತ್ತದೆ. ಉದ್ಯೋಗಾಕಾಂಕ್ಷಿಗಳಿಗೆ, ಉದ್ಯೋಗ ನೀಡಬೇಕಾಗಿದ್ದು ಅಧಿನಿಯಮದಂತೆ ಕಡ್ಡಾಯವಾಗಿರುವುದರಿಂದ,

ಉದ್ಯೋಗ ನಿಡದಿರುವುದಕ್ಕೆ ಪಾವತಿಸಬೇಕಾದ ನಿರುದ್ಯೋಗ ಭತ್ಯೆಯ ಜವಾಬ್ದಾರಿಯನ್ನು ಕೇಂದ್ರ ಸರ್ಕಾರ ತೆಗೆದುಕೊಳ್ಳುವುದಿಲ್ಲ. ಇದರ ಹೊಣೆಗಾರಿಕೆ ಸಂಪೂರ್ಣವಾಗಿ ರಾಜ್ಯ ಸರ್ಕಾರದ್ದಾಗಿರುತ್ತದೆ.

೨. ರಾಜ್ಯ ಉದ್ಯೋಗ ಖಾತರಿ ಪರಿಷತ್ತಿನ ಆಡಳಿತಾತ್ಮಕ ವೆಚ್ಚ

೩. ಯೋಜನೆಯ ಅನುಷ್ಠಾನಕ್ಕೆ ಅಗತ್ಯವಿರುವ ಆದರೆ ಕೇಂದ್ರ ಸರ್ಕಾರದ ಮಾರ್ಗ ಸೂಚಿಗಳ ಪ್ರಕಾರ ಖರ್ಚು ಮಾಡಲಾಗದ ಬಾಬ್ತುಗಳ ವೆಚ್ಚ.

೪. ಅನುದಾನ ಹಂಚಿಕೆಯ ಪ್ರಕ್ರಿಯೆ

ಗ್ರಾಮ ಪಂಚಾಯಿತಿಯ ಬೇಡಿಕೆ ಮತ್ತು ವಿನಿಯೋಗಕ್ಕನುಗುಣವಾಗಿ ಕಾರ್ಯಕ್ರಮ ಅಧಿಕಾರಿಯು ಅನುದಾನ ಬಿಡುಗಡೆ ಮಾಡುವರು.

ತಾಲ್ಲೂಕು ಪಂಚಾಯಿತಿಯ ಬೇಡಿಕೆ ಮತ್ತು ವಿನಿಯೋಗಕ್ಕನುಗುಣವಾಗಿ ಕಾರ್ಯಕ್ರಮ ಅಧಿಕಾರಿಯು ಅನುದಾನ ಬಿಡುಗಡೆ ಮಾಡುವರು.

ತಾಲ್ಲೂಕು ಪಂಚಾಯಿತಿಯ ಬೇಡಿಕೆ ಮತ್ತು ವಿನಿಯೋಗಕ್ಕನುಗುಣವಾಗಿ ಕಾರ್ಯಕ್ರಮ ಅಧಿಕಾರಿಯು ಅನುದಾನ ಬಿಡುಗಡೆ ಮಾಡುವರು.

ತಾಲ್ಲೂಕು ಪಂಚಾಯಿತಿಯ ಬೇಡಿಕೆ ಮತ್ತು ವಿನಿಯೋಗಕ್ಕೆ ಅನುಗುಣವಾಗಿ ಜಿಲ್ಲಾ ಕಾರ್ಯಕ್ರಮ ಸಮನ್ವಯ ಅಧಿಕಾರಿಗಳು ಕಾರ್ಯಕ್ರಮ ಅಧಿಕಾರಿಗಳಿಗೆ ಅನುದಾನ ಬಿಡುಗಡೆ ಮಾಡುವರು.

ಜಿಲ್ಲಾ ಕಾರ್ಯಕ್ರಮ ಸಮನ್ವಯಾಧಿಕಾರಿ, ರಾಜ್ಯ ಸರ್ಕಾರದ ಮೂಲಕ ಸಲ್ಲಿಸುವ ಬೇಡಿಕೆ ಮತ್ತು ವಿನಿಯೋಗಕ್ಕನುಗುಣವಾಗಿ ಕೇಂದ್ರ ಸರ್ಕಾರದಿಂದ ಅನುದಾನವನ್ನು ನೇರವಾಗಿ ಜಿಲ್ಲೆಗಳಿಗೆ ಬಿಡುಗಡೆ ಮಾಡಲಾಗುವುದು. ಇದರ ಜೊತೆಯಲ್ಲಿ ರಾಜ್ಯ ಸರ್ಕಾರವು ತನ್ನ ಪಾಲಿನ ಅನುದಾನವನ್ನು ಜಿಲ್ಲೆಗಳಿಗೆ ಬಿಡುಗಡೆ ಮಾಡುವುದು.

ಪ್ರತಿ ಅನುಷ್ಠಾನ ಏಜೆನ್ಸಿಯು ಅನುದಾನಕ್ಕಾಗಿ ಬೇಡಿಕೆ ಸಲ್ಲಿಸುವಾಗ, ಹಿಂದೆ ಬಿಡುಗಡೆ ಮಾಡಿದ ಅನುದಾನದಲ್ಲಿ ಶೇ.೬೦ರಷ್ಟು ಖರ್ಚು ಮಾಡಿರುವ ಬಗ್ಗೆ ಹಣ ಬಳಕೆ ಪ್ರಮಾಣ ಪತ್ರವನ್ನು ಲಗತ್ತಿಸಬೇಕು.

**೬. ಬ್ಯಾಂಕ್ ಖಾತೆಗಳಲ್ಲಿ ನಿಧಿ ನಿರ್ವಹಣೆ**

೧. ಪ್ರತಿ ಅನುಷ್ಠಾನ ಏಜೆನ್ಸಿಯ ಈ ಯೋಜನೆಯ ವ್ಯವಹಾರಕ್ಕಾಗಿ ಪ್ರತ್ಯೇಕ ಬ್ಯಾಂಕ್ ಖಾತೆಯನ್ನು ಹೊಂದಿರತಕ್ಕದ್ದು, ಗ್ರಾಮ ಪಂಚಾಯತಿಗಳಲ್ಲಿ ಕಾರ್ಯದರ್ಶಿ ಮತ್ತು ಅಧ್ಯಕ್ಷರ ಹೆಸರಿನ ಜಂಟಿ ಖಾತೆಯಲ್ಲಿ ನಿಧಿಯನ್ನು ನಿರ್ವಹಿಸಲಾಗುತ್ತದೆ.

೨. ಅನುಷ್ಠಾನ ಏಜೆನ್ಸಿ ಯಾವುದೇ ಆದರೂ ಕೂಲಿ ಪಾವತಿಯನ್ನು ಗ್ರಾಮ ಪಂಚಾಯಿತಿ ಮೂಲಕ ಮಾತ್ರ ಮಾಡಲಾಗುವುದು. ಇದಕ್ಕಾಗಿ ಪ್ರತಿ ಕುಟುಂಬಕ್ಕೆ ಅಥವಾ ಕುಟುಂಬದ ಸದಸ್ಯರು ಇಚ್ಛೆಸಿದಲ್ಲಿ ವೈಯಕ್ತಿಕವಾಗಿ ಗ್ರಾಮದಲ್ಲಿನ ಬ್ಯಾಂಕ್ ಅಥವಾ ಅಂಚೆ ಕಛೇರಿಯಲ್ಲಿ ಉಳಿತಾಯ ಖಾತೆ ಹೊಂದಿರತಕ್ಕದ್ದು.

೩. ಕೆಲಸ ಮಾಡಿದ ಕಾರ್ಮಿಕರಿಗೆ ಅವರುಗಳ ಕೂಲಿ ಮೊಬಲಗನ್ನು ನೇರವಾಗಿ ಅವರ ಬ್ಯಾಂಕ್ ಅಥವಾ ಅಂಚೆ ಕಛೇರಿಯ ಖಾತೆಗೆ ಜಮಾ ಮಾಡಲಾಗುವುದು. ಯಾವುದೇ ಕಾರಣಕ್ಕೂ ಕಾರ್ಮಿಕರಿಗೆ ಕೂಲಿಯ ಮೊಬಲಗನ್ನು ನಗದಾಗಿ ಪಾವತಿಸುವಂತಿಲ್ಲ.

೪. ಪಾವತಿಸಿದ ಕೂಲಿ ಮೊಬಲಗಿನ ವಿವರವನ್ನು ಗ್ರಾಮ ಪಂಚಾಯಿತಿಯಲ್ಲಿ ನಿರ್ವಹಿಸುವ ಉದ್ಯೋಗ ಮತ್ತು ಉದ್ಯೋಗಾಕಾಂಕ್ಷಿಗಳ ವಹಿಯಲ್ಲಿ (ನಮೂನೆ–೩) ದಾಖಲಿಸಲಾಗುವುದು. ಜೊತೆಯಲ್ಲಿ ಈ ವಿವರಗಳನ್ನು ಪ್ರತಿ ಕುಟುಂಬಕ್ಕೆ ನೀಡಿರುವ ಕುಟುಂಬ ಉದ್ಯೋಗ ಚೀಟಿ (ನಮೂನೆ–೪) ಯಲ್ಲಿ ದಾಖಲಿಸಬೇಕು. ಇದರಿಂದ ಪ್ರತಿ ಕುಟುಂಬಕ್ಕೆ ೧೦೦ ದಿನಗಳ ಉದ್ಯೋಗವನ್ನು ಒದಗಿಸಿರುವ ಬಗ್ಗೆ ವಿವರಗಳು ಲಭ್ಯವಾಗುತ್ತವೆ.

**೫. ಲೆಕ್ಕ ಪತ್ರಗಳ ನಿರ್ವಹಣೆ**

ಜಿಲ್ಲಾ ಪಂಚಾಯಿತಿ ಮತ್ತು ತಾಲ್ಲೂಕು ಪಂಚಾಯಿತಿಗಳಲ್ಲಿ ಈ ಯೋಜನೆಯ ಹಣಕಾಸಿನ ವ್ಯವಹಾರಗಳನ್ನು ಸಂಬಂಧಿಸಿದ ಆಯವ್ಯಯ ಮತ್ತು ಹಣಕಾಸು ನಿಯಮಗಳಲ್ಲಿನ ನಿರ್ದೇಶನದಂತೆ ನಿರ್ವಹಿಸತಕ್ಕದ್ದು. ಗ್ರಾಮ ಪಂಚಾಯಿತಿಗಳಲ್ಲಿ ದಿನಾಂಕ : ೦೧–೦೪–೨೦೦೬ ರಿಂದ ಜಾರಿಗೆ ಬಂದಿರುವ ಗ್ರಾಮ ಪಂಚಾಯಿತಿಯ ಆಯವ್ಯಯ ಮತ್ತು ಲೆಕ್ಕಗಳ ಹೊಸ ನಿಯಮಗಳು – ೨೦೦೬ ರಂತೆ ಜೋಡಿ ನಮೂದು ಪದ್ಧತಿಗಳಲ್ಲಿ ನಿರ್ವಹಿಸತಕ್ಕದ್ದು.

**೬. ಲೆಕ್ಕ ಪರಿಶೋಧನೆ**

ಈ ಯೋಜನೆಯ ಹಣಕಾಸು ವ್ಯವಹಾರಗಳಿಗೆ ಸಂಬಂಧಿಸಿದಂತೆ, ಲೆಕ್ಕ ಪರಿಶೋಧನಾ ಕಾರ್ಯವನ್ನು ಪಂಚಾಯಿತಿಗಳ ಶಾಸನಬದ್ಧ ಲೆಕ್ಕ ಪರಿಶೋಧಕರಿಂದ ಅಂದರೆ, ಜಿಲ್ಲಾ ಪಂಚಾಯತ್ ಮತ್ತು ತಾಲ್ಲೂಕು ಪಂಚಾಯತ್‌ಗಳಿಗೆ ಸಂಬಂಧಿಸಿದಂತೆ ಕರ್ನಾಟಕ ಮಹಾಲೇಖಪಾಲರು ಹಾಗೂ ಗ್ರಾಮ ಪಂಚಾಯಿತಿಗಳಿಗೆ ರಾಜ್ಯ ಲೆಕ್ಕ ಪತ್ರ ಇಲಾಖೆಯ ನಿಯಂತ್ರಕರು ಲೆಕ್ಕ ಪರಿಶೋಧನಾ ಕಾರ್ಯವನ್ನು ಕೈಗೊಳ್ಳುವರು.

**೭. ಸಾಮಾಜಿಕ ಲೆಕ್ಕ ಪರಿಶೋಧನೆ**

ಎಲ್ಲಾ ಪ್ರಕ್ರಿಯೆಗಳಲ್ಲಿ ಯೋಜನೆಯ ಅನುಷ್ಠಾನ ಮತ್ತು ಮೌಲ್ಯಮಾಪನ ಪಾರದರ್ಶಕವಾಗಿರಲು ಸಾರ್ವಜನಿಕರ ಭಾಗವಹಿಸುವಿಕೆ ಅವಶ್ಯಕ.

ಈ ಯೋಜನೆಯ ಮುಖ್ಯ ಉದ್ದೇಶ ಕಾರ್ಮಿಕರಿಗೆ ಉದ್ಯೋಗ ಒದಗಿಸುವುದಾಗಿದ್ದು, ಅವರಿಗೆ ದೊರೆಯಬೇಕಾಗಿರುವ ನ್ಯಾಯಯುತವಾದ ಹಕ್ಕುಗಳ ಬಗ್ಗೆ ಸಾರ್ವಜನಿಕ ತಪಾಸಣೆಯನ್ನು ಯೋಜನೆಯ ಅನುಷ್ಠಾನದ ಮೊದಲು, ಅನುಷ್ಠಾನದ ಸಮಯದಲ್ಲಿ ಮತ್ತು ಅನುಷ್ಠಾನದ ನಂತರ ನಡೆಸಲಾಗುವುದು. ಈ ಸಂದರ್ಭದಲ್ಲಿ ಕೆಳಕಂಡ ಅಂಶಗಳ ವಿವರಗಳನ್ನು ನಿಯಮಾನುಸಾರ ಪಾಲಿಸಲಾಗಿದೆಯೇ ಎಂಬ ಬಗ್ಗೆ ಪರಿಶೀಲಿಸಬೇಕಾಗಿದೆ.

೧. ನೋಂದಣಿ ಪ್ರಕ್ರಿಯೆ

೨. ಉದ್ಯೋಗ ಚೀಟಿ ವಿರತರಣೆ

೩. ಉದ್ಯೋಗ ಬೇಡಿಕೆಗಳ ಪರಿಗಣನೆ

೪. ಕಾಮಗಾರಿಗಳ ಆಯ್ಕೆ ಹಾಗೂ ಮಂಜೂರಾತಿ ಪ್ರಕ್ರಿಯೆಯಲ್ಲಿ ಪಾರದರ್ಶಕತೆ

೫. ಕಾಮಗಾರಿಗಳ ಅನುಷ್ಠಾನದಲ್ಲಿ ಪಾರದರ್ಶಕತೆ

೬. ಕೂಲಿ ಪಾವತಿ

೭. ಲೆಕ್ಕ ತಪಾಸಣೆಗೆ ದಾಖಲಾತಿಗಳನ್ನು ಒದಗಿಸುವುದು.

೮. ಗುಣನಿಯಂತ್ರಣ ಮತ್ತು ಮೌಲ್ಯಮಾಪನ ವರದಿಗಳ ಪ್ರಕಟಣೆ ಇತ್ಯಾದಿ.

೯. ಮಾಹಿತಿ ಹಕ್ಕು

ಯೋಜನೆಯ ಅನುಷ್ಠಾನದ ಬಗ್ಗೆ ಗ್ರಾಮ ಪಂಚಾಯಿತಿಯ ಕೈಗೊಂಡಿರುವ ಪ್ರಮುಖ ಕ್ರಮಗಳ ಬಗ್ಗೆ ಮಾಹಿತಿಯನ್ನು ಗ್ರಾಮಸ್ಥರಿಗೆ ಕಡ್ಡಾಯವಾಗಿ ಒದಗಿಸಬೇಕಾಗಿರುತ್ತದೆ. ಈ ಮಾಹಿತಿಗಳನ್ನು ಗ್ರಾಮ ಪಂಚಾಯಿತಿಯ ಕೇಂದ್ರ ಸ್ಥಾನದಲ್ಲಿ ಒಂದು ಮಾಹಿತಿ ಗೋಡೆಯನ್ನು ನಿರ್ಮಿಸಿ ಅದರಲ್ಲಿ ದಾಖಲಿಸತಕ್ಕದ್ದು. ಗೋಡೆಯ ಒಂದು ಭಾಗದಲ್ಲಿ ಬಹುಕಾಲದವರೆಗೆ ಅಗತ್ಯವಿರುವ ಮಾಹಿತಿಗಳಾದ ಕಾಮಗಾರಿ ದರಪಟ್ಟಿ, ಮಾರ್ಪಡಿಸಲಾಗದ ಬಾಬ್ತುಗಳು, ಮುಖ್ಯವಾದ ಮಾರ್ಗಸೂಚಿಗಳು, ಸರ್ಕಾರದ ಸುತ್ತೋಲೆಗಳು, ಗುರುತಿಸಲಾದ ಕಾಮಗಾರಿಗಳ ಪಟ್ಟಿ, ಇತ್ಯಾದಿಗಳನ್ನು ಬಣ್ಣದಲ್ಲಿ ದಾಖಲಿಸಬೇಕು.

ಗೋಡೆಯ ಇನ್ನೊಂದು ಭಾಗದಲ್ಲಿ ಪ್ರತಿ ವಾರ ಬದಲಾಗುವ ಮಾಹಿತಿಗಳಾದ, ಅಂದರೆ, ಕೆಲಸ ಮಾಡುವ ಕಾರ್ಮಿಕರ ಸಂಖ್ಯೆ, ಖರೀದಿಸಲಾದ ಮತ್ತು ಉಪಯೋಗಿಸಲಾದ ಸಾಮಗ್ರಿಗಳು ಹಾಗೂ

ಇವುಗಳ ವೆಚ್ಚ ಇತ್ಯಾದಿಗಳನ್ನು ದಾಖಲಿಸಬೇಕು. ಈ ಮಾಹಿತಿಯನ್ನು ವಾರಕ್ಕೊಮ್ಮೆ ಸೂಕ್ತವಾಗಿ ಬದಲಾಯಿಸತಕ್ಕದ್ದು.

**೧೦. ಚುನಾಯಿತ ಪ್ರತಿನಿಧಿಗಳ ಜವಾಬ್ದಾರಿ**

ಹಣಕಾಸು ನಿರ್ವಹಣೆಗೆ ಸಂಬಂಧಿಸಿದ ವಿಷಯಗಳಲ್ಲಿ ಸರ್ಕಾರಿ ಸಿಬ್ಬಂದಿಯವರು ಪೂರ್ಣವಾಗಿ ಜವಾಬ್ದಾರರು ಎಂಬ ಧೋರಣೆ ಜನಪ್ರತಿನಿಧಿಗಳಲ್ಲಿ ಸರ್ವೇ ಸಾಮಾನ್ಯ. ಆದರೆ ಯೋಜನೆಯ ಅನುಷ್ಠಾನಕ್ಕೆ ಸಂಬಂಧಪಟ್ಟಂತೆ ಅಧ್ಯಕ್ಷರು, ಉಪಾಧ್ಯಕ್ಷರು, ಸ್ಥಾಯಿ ಸಮಿತಿ/ಉಪಸಮಿತಿಯ ಅಧ್ಯಕ್ಷರು/ಸದಸ್ಯರುಗಳು ವಿತ್ತೀಯ ಬಾಧ್ಯತೆಯುಳ್ಳ ನಿರ್ಣಯವನ್ನು ತೆಗೆದುಕೊಳ್ಳುವಂತಹ ಪ್ರಸಂಗಗಳಲ್ಲಿ ಹಣಕಾಸಿನ ನಿಯಮಗಳ ತಿಳುವಳಿಕೆ ಅತ್ಯವಶ್ಯಕವಾಗಿರುತ್ತದೆ. ಯಾವುದೇ ತಪ್ಪು ನಿರ್ಣಯಗಳಿಂದ ಉಂಟಾಗುವ ಆರ್ಥಿಕ ನಷ್ಟಕ್ಕೆ ಇಂತಹ ನಡವಳಿಗಳಲ್ಲಿ ಭಾಗಿಯಾಗಿರುವ ಎಲ್ಲರೂ ಜವಾಬ್ದಾರರಾಗಿರುತ್ತಾರೆ. ಇದಕ್ಕಾಗಿ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ ಪ್ರಕರಣ ೨೮೬ ರಲ್ಲಿ ಎಲ್ಲಾ ಚುನಾಯಿತ ಸದಸ್ಯರುಗಳನ್ನು ಸರ್ಕಾರಿ ಉದ್ಯೋಗಿಗಳ ರೀತಿಯಲ್ಲಿಯೇ ಭಾರತ ದಂಡ ಸಂಹಿತೆ ೨೧ ನೇ ಪ್ರಕರಣದಂತೆ ಮತ್ತು ಭ್ರಷ್ಟಾಚಾರ ನಿವಾರಣೆ ಅಧಿನಿಯಮ ೧೯೮೮ ರಲ್ಲಿ ಅರ್ಥೈಸಿರುವಂತೆ "ಲೋಕನೌಕರ" ಎಂದು ಪರಿಗಣಿಸಲಾಗಿದೆ.

# ಅಧ್ಯಾಯ – ೪

# ಹೆಬ್ರಿ ಪಂಚಾಯಿತಿಯ ಪರಿಚಯ ಹಾಗೂ ಯೋಜನೆಯ ಅನುಷ್ಠಾನ, ವಿವಿಧ ಜಿಲ್ಲೆಗಳ ಅಂಕಿ ಅಂಶಗಳು ಮತ್ತು ವಾರ್ಷಿಕ ವರದಿ

## ೪.೧. ಪ್ರವೇಶ

ಪ್ರಸ್ತುತ ಅಧ್ಯಯನವು ಪ್ರಕರಣ ಅಧ್ಯಯನವಾಗಿದೆ. ಈ ಯೋಜನೆಯ ಕಾರ್ಯ ವ್ಯಾಪ್ತಿ ಇಡೀ ಭಾರತಕ್ಕೆ ಹರಡಿದೆ. ಅಧ್ಯಯನದ ಅನುಕೂಲತೆಯ ದೃಷ್ಟಿಯಿಂದ ಕರ್ನಾಟಕ ರಾಜ್ಯದ ಉಡುಪಿ ಜಿಲ್ಲೆಯ ಕಾರ್ಕಳ ತಾಲ್ಲೂಕಿನ ಹೆಬ್ರಿ ಗ್ರಾಮ ಪಂಚಯಿತಿಯನ್ನು ಮಾತ್ರವೇ ಆರಿಸಿಕೊಳ್ಳಲಾಗಿದೆ. ಮೂಲತಃ ಉಡುಪಿಯು ದಕ್ಷಿಣ ಕನ್ನಡ ಜಿಲ್ಲೆಯ ಅವಿಭಾಜ್ಯ ಅಂಗವಾಗಿದ್ದ ಉತ್ತರದ ಮೂರು ತಾಲ್ಲೂಕುಗಳು ಸೇರಿ ೧೯೯೭ ಆಗಸ್ಟ್ ೨೫ ರಂದು ಉದ್ಘಾಟನೆಗೊಂಡು ಪ್ರತ್ಯೇಕಗೊಂಡು ಜಿಲ್ಲೆಯಾಗಿ ರೂಪುಗೊಂಡಿತು. ಜಿಲ್ಲೆಯ ಒಟ್ಟು ಭೌಗೋಳಿಕ ವಿಸ್ತೀರ್ಣ ೩೫೭೫ ಚದರ ಕಿ.ಮೀ. ಆಡಳಿತದ ದೃಷ್ಟಿಯಿಂದ ಜಿಲ್ಲೆಯನ್ನು ಉಡುಪಿ ಕುಂದಾಪುರ ಮತ್ತು ಕಾರ್ಕಳವೆಂಬ ಮೂರು ತಾಲ್ಲೂಕುಗಳಾಗಿ ವಿಂಗಡಿಸಲಾಗಿದೆ. ಕರಾವಳಿಯ ಸುಂದರ ಪರಿಸರದಲ್ಲಿ  ಜಿಲ್ಲೆಯಾಗಿ ರೂಪುಗೊಂಡ ಉಡುಪಿಯು ಶ್ರೀಕೃಷ್ಣನ ನಾಡಾಗಿದ್ದು, ಹೋಟೆಲ್ ಉದ್ಯಮ, ಶಿಕ್ಷಣ ಕ್ಷೇತ್ರದಲ್ಲಿನ ಸಾಧನೆಗಳಿಂದಾಗಿ ಅಂತರರಾಷ್ಟ್ರೀಯ ಖ್ಯಾತಿಯನ್ನು ಹೊಂದಿದೆ. ೨೦೦೧ರ ಜನಗಣತಿಯ ಪ್ರಕಾರ ಜಿಲ್ಲೆಯ ಒಟ್ಟು ಜನಸಂಖ್ಯೆ ೧೧, ೧೨, ೨೪೩ ಜಿಲ್ಲೆಯು ಶೇ. ೮೧.೪೫ ರಷ್ಟು ಗ್ರಾಮೀಣ ಜನಸಂಖ್ಯೆಯನ್ನು ಹೊಂದಿದೆ.

## ೪.೨. ಹೆಬ್ರಿಯ ಇತಿಹಾಸ ಮತ್ತು ಪರಿಚಯ

**ಉಡುಪಿ ಜಿಲ್ಲೆಯಲ್ಲಿ ಈ ಯೋಜನೆಯನ್ನು ಮೊದಲು ಅನುಷ್ಠಾನಗೊಳಿಸಿದ್ದು, ಹೆಬ್ರಿ ಪಂಚಾಯತ್.**

ಹೆಬ್ರಿಯು ಉಡುಪಿ ಜಿಲ್ಲೆಯ ಕಾರ್ಕಳ ತಾಲ್ಲೂಕಿನ ವ್ಯಾಪ್ತಿಗೊಳಪಟ್ಟಿದೆ. ಹೆಬ್ರಿಯ ಶಾಸನಗಳ ಪ್ರಕಾರ ಬೇರಿ ಊರು, ಹೆಬ್ಬೇರಿ, ತದನಂತರ ಹೆಬ್ರಿಯಾಯಿತೆಂದು ತಿಳಿದು ಬರುತ್ತದೆ. ರಾಜಕೀಯವಾಗಿ ಸಾಂಸ್ಕೃತಿಕವಾಗಿ ಆರ್ಥಿಕವಾಗಿ ಉಡುಪಿಯ ನಕ್ಷೆಯಲ್ಲಿ ತನ್ನದೇ ಆದ ಛಾಪನ್ನು ಒತ್ತಿದೆ. ರಾಜ್ಯದಲ್ಲಿಯೇ ಅತಿ ಹೆಚ್ಚು ಅಕ್ಕಿ ಗಿರಣಿಗಳನ್ನು ಹೊಂದಿದ ಕೀರ್ತಿ ಹೆಬ್ರಿಗಿದೆ. ಮಂಗಳೂರು, ಬೆಂಗಳೂರು ಮತ್ತು

ಕರಾವಳಿ ಪ್ರದೇಶದ ಜನರಿಗೆ ಹೆಬ್ರಿ ಪರಿಸರದ ಅಕ್ಕಿಯೇ ಶ್ರೇಷ್ಠ ಗೇರು ಬೀಜ ಸಂಸ್ಕರಣತೆಯ ಕಾರ್ಖಾನೆ ಹೆಬ್ರಿ ಪರಿಸರದಲ್ಲಿ ಅತೀ ಹೆಚ್ಚು ಕಾರ್ಯ ನಿರ್ವಹಿಸುತ್ತಿವೆ. ಕನಿಷ್ಠ ೨ಸಾವಿರ ಯುವತಿಯರು ಕಾರ್ಖಾನೆಗಳಲ್ಲಿ ದುಡಿಯುತ್ತಿದ್ದಾರೆ. ಇದರಿಂದಲೇ ಹೆಬ್ರಿ ಚಲಾವಣೆಯಲ್ಲಿರುವ ಒಂದು ಗ್ರಾಮೀಣ ಪ್ರದೇಶವಾಗಿದೆ.

ಕರ್ನಾಟಕ ರಾಜ್ಯದ ಯಾವುದೇ ಒಂದು ತಾಲ್ಲೂಕು ಮಟ್ಟದಲ್ಲಿ ಪಾವತಿಯಾಗುವ ಆದಾಯ ತೆರಿಗೆ ಮಾರುಕಟ್ಟೆ ಸುಂಕ, ಮಾರಾಟ ತೆರಿಗೆ, ವೃತ್ತಿ ತೆರಿಗೆ, ಹೆಬ್ರಿಯ ೧೦ ಕಿ.ಮೀ. ಸುತ್ತಳತೆಯಿಂದ ಪಾವತಿಯಾಗುತ್ತದೆ. ಇದಲ್ಲದೆ ಪಂಚಾಯ್ತಿ ಮಟ್ಟದಲ್ಲಿ ರಾಜ್ಯದಲ್ಲಿಯೇ ಅತಿ ಹೆಚ್ಚು ವಿದ್ಯುತ್ ಬಿಲ್ಲು ಪಾವತಿಯಾಗುತ್ತದೆ.

ಹೆಬ್ರಿ ರಾಜಕೀಯವಾಗಿ ಹೆಸರು ಮಾಡಿದೆ. ಕಾರ್ಕಳ ಕ್ಷೇತ್ರದ ಶಾಸಕರಾಗಿ ಎರಡು ಬಾರಿ ಹೆಬ್ರಿಯ ನಿವಾಸಿ ಎಚ್.ಗೋಪಾಲ ಭಂಡಾರಿಯವರು ಆಯ್ಕೆಯಾಗಿರುತ್ತಾರೆ. ತಾಲ್ಲೂಕು ಅಧ್ಯಕ್ಷರಾಗಿ ಎಸ್.ನರಸಿಂಹನಾಯಕ್‌ರವರು ಮತ್ತು ಉಡುಪಿ ಜಿಲ್ಲಾ ಪಂಚಾಯತ್ ಉಪಾಧ್ಯಕ್ಷರಾಗಿ ಎಚ್.ಪ್ರಸನ್ನ ಬಲ್ಲಾಳರವರು ಆಯ್ಕೆಯಾಗಿದ್ದರು. ಸಾಮಾಜಿಕವಾಗಿ ಭುಜಂಗ ಬಲ್ಲಾಳ, ವಿಠಲಹೆಗಡೆ ಸುಭೋದ್ ಬಲ್ಲಾಳ್‌ರಂತಹ ಗಣ್ಯರು ಹೆಬ್ರಿಯ ಅಭಿವೃದ್ಧಿಗಾಗಿ ದುಡಿದಿದ್ದಾರೆ. ವಿಶೇಷವೆಂದರೆ ಪ್ರಸ್ತುತ ಕೇಂದ್ರ ಸರ್ಕಾರದ ಕಾನೂನು ಮಂತ್ರಿ ವೀರಪ್ಪಮೊಯ್ಲಿಯವರು ಕಾರ್ಕಳ ಕ್ಷೇತ್ರದಿಂದಲೇ ಆಯ್ಕೆಗೊಂಡು ಕರ್ನಾಟಕ ರಾಜ್ಯದ ಮುಖ್ಯಮಂತ್ರಿಯಾದವರು.

ಹೆಬ್ರಿ ಪಂಚಾಯತ್ ಉಡುಪಿ ಜಿಲ್ಲೆಯಲ್ಲಿಯೇ ಅತ್ಯುತ್ತಮ ಗ್ರಾಮ ಪಂಚಾಯತ್ ಎಂದು ೨೦೦೬-೦೭ ರಲ್ಲಿ ಪ್ರಶಸ್ತಿ ಪಡೆದಿತ್ತು. ರಾಜ್ಯದ ೫೬೬೨ ಗ್ರಾಮ ಪಂಚಾಯತ್‌ಗಳಲ್ಲಿ ಅತ್ಯುತ್ತಮ ಎಂದು ೧೦ ಗ್ರಾಮ ಪಂಚಾಯತ್ ಆಯ್ಕೆಯಾಗಿದ್ದವು. ಆ ಹತ್ತರಲ್ಲಿ ಹೆಬ್ರಿ ಪಂಚಾಯತ್ ಒಂದು. ಮಿನಿ ವಿಧಾನಸೌಧ ಕಟ್ಟಡ ಎಲ್ಲಾ ಸರಕಾರಿ ಸವಲತ್ತನ್ನು ಒಂದೇ ಸೂರಿನಡಿಯಲ್ಲಿ ಸಿಗುವ ವ್ಯವಸ್ಥೆ ಕಲ್ಪಿಸಿದೆ.

ಅವಿಭಜಿತ ದಕ್ಷಿಣಕನ್ನಡ ಜಿಲ್ಲೆಯಲ್ಲಿ ತಾಲ್ಲೂಕು ಪುನರ್ ವಿಭಜನೆ ಆಗುವುದು. ಹೆಬ್ರಿ ಎಲ್ಲಾ ದೃಷ್ಟಿಯಿಂದಲೂ ತಾಲ್ಲೂಕು ಆಗುವ ಅರ್ಹತೆ ಹೊಂದಿದೆ. ಹೆಬ್ರಿ ತಾಲ್ಲೂಕು ಆಗಬೇಕೆಂಬ ಆಶಯ ಇಂದು ನಿನ್ನೆಯದಲ್ಲ. ಕರ್ನಾಟಕ ರಾಜ್ಯವು ಮೈಸೂರು ರಾಜ್ಯವೆಂದು ಕರೆಸಿಕೊಳ್ಳುತ್ತಿದ್ದಾಗ ಕಾರ್ಕಳ ಕ್ಷೇತ್ರದ ಶಾಸಕರಾಗಿ ಅನಂತರ ಸಚಿವರೂ ಆಗಿದ್ದ ಕೀರ್ತಿಶೇಷ ಕೆ.ಕೆ. ಹೆಗ್ಡೆಯವರು, ೧೯೫೭ ಜೂನ್ ೧೭ ರಂದು ಹೆಬ್ರಿಗೆ ಭೇಟಿ ನೀಡಿದ್ದಾಗಲೇ ಹೆಬ್ರಿ ಮಲೆನಾಡು ವಲಯದ ಬಹುಮುಖ್ಯ ತಾಲ್ಲೂಕು ಆಗಬೇಕೆಂದು ಆಶಿಸಿದ್ದರು.

ಹೆಬ್ರಿ ದಿನದಿಂದ ದಿನಕ್ಕೆ ಸರ್ವತೋಮುಖವಾಗಿ ಬೆಳೆಯುತ್ತಿದ್ದು ಕೈಗಾರಿಕೆಗಳ ಕೇಂದ್ರವಾಗಿದೆ. ಶ್ರೀ ರಮಣ್‌ನಾಯಕ್, ಆನಂದ್ರಾಯ ಪೈ, ಪ್ರಭಾಕರ್ ನಾಯಕ್ ರಮೇಶ್ ಭಟ್, ಜೋಯಿಸ್ ಕುಟುಂಬದವರು ಮತ್ತು ಬಲ್ಲಾಳ ಸಹೋದರರು ಇಲ್ಲಿಯ ಉದ್ದಿಮೆಯನ್ನು ಬೆಳೆಸಿದವರು.

ಕಾಡು ಉತ್ಪತ್ತಿ ವ್ಯವಹಾರಕ್ಕೆ ಹೆಬ್ರಿಗೆ ಅಗ್ರಸ್ಥಾನ, ಹೆಬ್ರಿಯಲ್ಲಿ ಪ್ರಥಮ ದರ್ಜೆ ಕಾಲೇಜು, ೨ ಪದವಿ ಪೂರ್ವ ಕಾಲೇಜುಗಳು, ವಸತಿಯುತ ಕೇಂದ್ರಿಯ ನವೋದಯ ಶಾಲೆ, ಹಿಂದುಳಿದ ವರ್ಗ, ಪರಿಶಿಷ್ಟ ವರ್ಗಗಳಿಗೆ ಮೀಸಲಾದ ವಸತಿ ಗೃಹ ಶಾಲೆಗಳಿವೆ. ಪೂರ್ಣ ಪ್ರಮಾಣದ ಆರಕ್ಷಕ ಠಾಣೆ, ೫೦ ಹಾಸಿಗೆಗಳ ಸಮುದಾಯ ಆರೋಗ್ಯ ಕೇಂದ್ರ, ನರ್ಸಿಂಗ್ ಹೋಮ್‌ಗಳು, ಖಜಾನೆ, ಅರಣ್ಯ ವಲಯ ವಿಭಾಗ, ದೂರವಾಣಿ ವಿನಿಮಯ ಕೇಂದ್ರ, ಅಂಚೆ ಸೌಲಭ್ಯ, ವಿದ್ಯುತ್ ಸಬ್‌ಸ್ಟೇಷನ್, ಪ್ರವಾಸಿ ಮಂದಿರ, ವನ್ಯ ಜೀವಿ ಸಂರಕ್ಷಣಾ ವಿಭಾಗ, ಲಯನ್ಸ್, ಜೇಸಿ, ಗ್ರಾಮೀಣ ರೋಟರಿ, ಸಿಂಡಿಕೇಟ್ ಬ್ಯಾಂಕ್, ವಿಜಯ ಬ್ಯಾಂಕ್, ಕೆನರಾ ಬ್ಯಾಂಕ್, ಭಾರತೀಯ ಸ್ಟೇಟ್ ಬ್ಯಾಂಕು, ಹೆಬ್ರಿಯ ವ್ಯವಸಾಯ ಬ್ಯಾಂಕ್, ಕರ್ನಾಟಕ ಗ್ರಾಮೀಣ ಬ್ಯಾಂಕ್ ಸೇವಾ ಸೌಲಭ್ಯಗಳಿವೆ. ಎಲ್ಲಾ ದಿನ ಪತ್ರಿಕೆಯ ವರದಿಗಾರರು ಹಾಗೂ ರಾಜ್ಯೋತ್ಸವ ಪ್ರಶಸ್ತಿ ವಿಜೇತ ಹೆಬ್ರಿ ಸುಕುಮಾರ್ ಮುನಿಯಾಲ್‌ರವರ ಸಾರಥ್ಯದಲ್ಲಿ ಪ್ರಕಟಗೊಳ್ಳುವ "ಸುದ್ದಿಕಿರಣ" ಪತ್ರಿಕೆಯೂ ಇದೆ. "ಹೆಬ್ರಿ ನ್ಯೂಸ್ ಟಿವಿ ಚಾನೆಲ್ ಸಹ ಇವರ ಸಾರಥ್ಯದಲ್ಲಿದೆ.

ಅನಂತಪದ್ಮನಾಭ ದೇವರ ಸನ್ನಿಧಿಯಲ್ಲಿ ವರ್ಷಕ್ಕೆ ನೂರಾರು ಮದುವೆ ಸಮಾರಂಭಗಳು ನಡೆಯುತ್ತಿರುವುದು ಹೆಬ್ರಿಗೆ ಒಂದು ವಿಶೇಷ ಕಿರೀಟಧಾರಣೆ. ದಿನಕ್ಕೆ ೧೫೦ ಬಸ್ಸುಗಳು, ವಿವಿಧ ಊರುಗಳಿಂದ ಹೆಬ್ರಿಗೆ ಬಂದು ಹೋಗುತ್ತವೆ. ಹೆಬ್ರಿಯ ಅನಂತ ಪದ್ಮನಾಭ ಮೋಟಾರ್ಸ್, ಸುಗಮ ಸಾರಿಗೆ ರಾಜ್ಯಕ್ಕೆ ಮಾದರಿಯಾಗಿ ಸೇವೆ ನೀಡುತ್ತಿರುವುದು ಹೆಬ್ರಿ ಊರಿಗೆ ಒಂದು ಹೆಸರಾಗಿದೆ.

**ಹೆಬ್ರಿ ಪಂಚಾಯತ್ ವ್ಯಾಪ್ತಿಯಲ್ಲಿರುವ ಒಟ್ಟು ಜನಸಂಖ್ಯೆ ಮತ್ತು ಕುಟುಂಬಗಳು**

| | |
|---|---|
| ಜನಸಂಖ್ಯೆ | ೧೦.೨೫೭ |
| ಕುಟುಂಬಗಳು | ೨.೨೦೦ |
| ಪರಿಶಿಷ್ಟ ಜಾತಿ | ೩೬೩ |
| ಪರಿಶಿಷ್ಟ ಪಂಗಡ | ೧೧೧೬ |
| ಬೇಸಾಯಗಾರರು | ೧೧೭೨ |

| | |
|---|---|
| ಕೃಷಿ ಕಾರ್ಮಿಕರು | ೧೨೫೯ |
| ಕೃಷಿಯೇತರ ಕಾರ್ಮಿಕರು | ೧೦೭೨ |
| ಅಕ್ಷರಸ್ಥರು | ೫೩೬೬ |
| ಒಟ್ಟು ಹಳ್ಳಿಗಳು | ೦೮ |

**ಎ) ಈ ಯೋಜನೆಯಡಿಯಲ್ಲಿ ಹೆಸರನ್ನು ನೊಂದಾಯಿಸಿದ ಒಟ್ಟು ಕುಟುಂಬಗಳು**

| | |
|---|---|
| ಪರಿಶಿಷ್ಠ ಜಾತಿ | ೦೮ |
| ಪರಿಶಿಷ್ಠ ಪಂಗಡ | ೮೬ |
| ಇತರೆ | ೨೪೪ |
| ಒಟ್ಟು | **೩೩೮** |

**ಬಿ) ಈ ಯೋಜನೆಯಡಿಯಲ್ಲಿ ವಿತರಿಸಲಾದ ಉದ್ಯೋಗ ಚೀಟಿಗಳು**

೩೩೮ (೭೫೫ ಜನರಿಗೆ ಉದ್ಯೋಗ ನೀಡಿದೆ)

**ಸಿ) ಈ ಯೋಜನೆಯಡಿಯಲ್ಲಿ ಕೆಲಸ ಒದಗಿಸಿದ ಒಟ್ಟು ಮಾನವ ದಿನಗಳು:** ೮೫೭೩

**ಡಿ) ಒಟ್ಟು ಒದಗಿಸಿದ ಮಾನವ ದಿನಗಳು**

| | |
|---|---|
| ಪರಿಶಿಷ್ಠ ಜಾತಿ | ೦೯ |
| ಪರಿಶಿಷ್ಠ ಪಂಗಡ | ೧೩೬೨ |
| ಇತರೆಯವರು | ೭೨೦೨ |
| ಒಟ್ಟು | **೮೫೭೩** |

ಇದರಲ್ಲಿ ಮಹಿಳೆಯರು : ೩೦೫೯

ಪುರುಷರು : ೫೫೧೪

**ಇ) ನೂರು ದಿನ ಪೂರೈಸಿದ ಕುಟುಂಬಗಳು : ೦೪**

**ಎಫ್)** ಈ ಯೋಜನೆಯ ೧-೪-೨೦೦೮ ರಂದು ಈ ಪಂಚಾಯತ್‌ನಲ್ಲಿ ಅಸ್ತಿತ್ವಕ್ಕೆ ಬಂದರೂ ಅನುಷ್ಠಾನ ಮತ್ತು ಅರ್ಜಿ ವಿತರಣೆಯು ೨೦೦೯-೧೦ನೇ ಸಾಲಿನಿಂದ.

**ಜಿ)** ಈ ಪಂಚಾಯತ್‌ನಲ್ಲಿರುವ ಒಟ್ಟು ಸದಸ್ಯರ ಸಂಖ್ಯೆ – ೨೬

**ಹೆಚ್)** ಹೆಬ್ರಿ ಪಂಚಾಯತ್‌ನ ಒಟ್ಟು ಭೌಗೋಳಿಕ ವಿಸ್ತೀರ್ಣ – ೧೨೫೦೯

**ಐ)** ಈ ಪಂಚಾಯತ್‌ನಲ್ಲಿ ಶೌಚಾಲಯ ಹೊಂದಿದ ಮನೆಗಳು – ೪೨೬

**ಜೆ)** ೨೦೦೬-೦೭ರಲ್ಲಿ ಅತ್ಯುತ್ತಮ ಪ್ರಶಸ್ತಿ ಪಡೆದ ೫೬೬೨ ಗ್ರಾಮ ಪಂಚಾಯಿತಿಗಳಲ್ಲಿ ಅತ್ಯುತ್ತಮ ಎಂದು ೧೦ ಪಂಚಾಯತ್ ನೀಡಲಾಯಿತು. ಆ೧೦ರಲ್ಲಿ ಹೆಬ್ರಿ ಪಂಚಾಯತ್ ಒಂದು.

## ೪.೩ ಪಂಚಾಯತ್ ರಾಜ್ ಮಟ್ಟದಲ್ಲಿ ಯೋಜನೆಯ ಅನುಷ್ಠಾನ

ಅನುಷ್ಠಾನ ಪ್ರಕ್ರಿಯೆಯಲ್ಲಿ ೩ ಸ್ಥಳೀಯ ಸಂಸ್ಥೆಗಳು ಪಾತ್ರವಹಿಸುತ್ತದೆ.

### ೧. ಗ್ರಾಮ ಮಟ್ಟದಲ್ಲಿ

ಗ್ರಾಮ ಪಂಚಾಯಿತಿಯು ಯೋಜನೆಯ ಅನುಷ್ಠಾನದ ಪ್ರಾಧಿಕಾರವಾಗಿರುತ್ತದೆ. ವಾರ್ಡ್ ಸಭೆ ಮತ್ತು ಗ್ರಾಮ ಸಭೆ ಮೂಲಕ ಶಿಫಾರಸ್ಸಾಗಿ ಬರುವ ಕಾಮಗಾರಿಗಳ ಪೈಕಿ ಅದ್ಯತೆಯನ್ನು ಗುರುತಿಸಿ ಅವುಗಳನ್ನು ಅನುಷ್ಠಾನಗೊಳಿಸುವ ಮತ್ತು ಮೇಲ್ವಿಚಾರಣೆ ಮಾಡುವ ಜವಾಬ್ದಾರಿ ಗ್ರಾಮ ಪಂಚಾಯಿತಿಯದ್ದಾಗಿರುತ್ತದೆ. ನೋಂದಣಿಗಾಗಿ ಸಲ್ಲಿಸುವ ಅರ್ಜಿಗಳನ್ನು ಪರಿಶೀಲಿಸಿ ಉದ್ಯೋಗ ಚೀಟಿಗಳನ್ನು ವಿತರಿಸುವ ಹಾಗೂ ಉದ್ಯೋಗ ಚೀಟಿಯನ್ನು ನವೀಕರಿಸುವ ಜವಾಬ್ದಾರಿ ಗ್ರಾಮ ಪಂಚಾಯಿತಿಯದ್ದಾಗಿರುತ್ತದೆ. ಗ್ರಾಮ ಪಂಚಾಯಿತಿ ನೆರವಾಗಲು ಒಬ್ಬ ಗ್ರಾಮ ಅಭಿವೃದ್ಧಿ ಸಹಾಯಕ ಇರುತ್ತಾರೆ.

**ಗ್ರಾಮ ಪಂಚಾಯಿತಿ ಜವಾಬ್ದಾರಿ**

ಪ್ರತಿ ಗ್ರಾಮ ಪಂಚಾಯಿತಿಯು ತಮಗೆ ನಿಗದಿಪಡಿಸಿದ ಮೊತ್ತಕ್ಕೆ ಆದ್ಯತೆ ಮೇರೆಗೆ ತಮ್ಮ ವ್ಯಾಪ್ತಿಯ ಕಾಮಗಾರಿಗಳನ್ನು ವಾರ್ಡ್ ಸಭೆ ಗ್ರಾಮ ಸಭೆಗಳ ಶಿಫಾರಸ್ಸಿನ ಮೇರೆಗೆ ತಯಾರಿಸಬೇಕು. ಗ್ರಾಮ ಪಂಚಾಯಿತಿಯು ಅನುಮೋದಿಸಿ ಸಿದ್ಧಪಡಿಸಿದ ಕಾಮಗಾರಿಗಳ ಪಟ್ಟಿಯನ್ನು ಅನುಮೋದನೆಗಾಗಿ ಗ್ರಾಮ ಪಂಚಾಯಿತಿಯು ಕಾರ್ಯಕ್ರಮ ಅಧಿಕಾರಿಗಳಿಗೆ ಸಲ್ಲಿಸಬೇಕು.

**೨. ತಾಲ್ಲೂಕು ಮಟ್ಟದಲ್ಲಿ**

ತಾಲ್ಲೂಕು ಪಂಚಾಯಿತಿಯು ಗ್ರಾಮ ಪಂಚಾಯಿತಿಗಳಿಂದ ಬಂದ ಯೋಜನೆಗಳನ್ನು ಕ್ರೋಡಿಕರಿಸಿ ಪರಿಶೀಲಿಸಿ ಅನುಮೋದಿಸಿ ಅಂತಿಮ ಮಂಜೂರಾತಿಗಾಗಿ ಜಿಲ್ಲಾ ಪಂಚಾಯಿತಿಗೆ ಕಳುಹಿಸಿಕೊಡುವುದು. ತಾಲ್ಲೂಕು ಪಂಚಾಯಿತಿಯ ಕಾರ್ಯನಿರ್ವಾಹಕ ಅಧಿಕಾರ ಈ ಯೋಜನೆಯ ಕಾರ್ಯಕ್ರಮ ಅಧಿಕಾರಿಯಾಗಿರುತ್ತಾರೆ. ಕಾರ್ಯಕ್ರಮ ಅಧಿಕಾರಿಯು ತಾಲ್ಲೂಕು ಹಂತದಲ್ಲಿ ವಿವಿಧ ಪ್ರಕ್ರಿಯೆಗಳ ಬಗ್ಗೆ ಸಮನ್ವಯ ಮಾಡುವ ಅತಿ ಹೆಚ್ಚು ಜವಾಬ್ದಾರಿ ಹೊಂದಿರುತ್ತಾರೆ. ತಾಲ್ಲೂಕು ಪಂಚಾಯಿತಿ ಈ ಯೋಜನೆಯಡಿ ತನ್ನ ಕರ್ತವ್ಯ ನಿರ್ವಹಿಸಲು ಕಾರ್ಯಕ್ರಮ ಅಧಿಕಾರಿ ಸಹಾಯ ಮಾಡುತ್ತಾರೆ. ಕಾರ್ಯನಿರ್ವಹಣಾ ಏಜೆನ್ಸಿಗಳು ಸಮಯಕ್ಕೆ ಸರಿಯಾಗಿ ಕೆಲಸ ಪ್ರಾರಂಭಿಸುವ ನಿಗದಿತ ಸಮಯದೊಳಗೆ ಕೆಲಸ ನೀಡುವ ಹಾಗೂ ಅಕುಶಲ ಕಾರ್ಮಿಕರಿಗೆ ಲಭ್ಯವಿರುವ ಹಕ್ಕುಗಳು ಸಿಗುವಂತೆ ಮಾಡುವ ಜವಾಬ್ದಾರಿ ಮತ್ತು ಗ್ರಾಮ ಸಭೆಗಳ ಮೂಲಕ ಸಾಮಾಜಿಕ ಲೆಕ್ಕ ಪರಿಶೋಧನೆ ಮಾಡಿಸುವುದು, ಸಾರ್ವಜನಿಕ ಕುಂದು ಕೊರತೆಗಳ ವಿಚಾರಣೆ ಮಾಡುವ ಜವಾಬ್ದಾರಿ ಕಾರ್ಯಕ್ರಮ ಅಧಿಕಾರಿಯದ್ದಾಗಿರುತ್ತದೆ. ಕಾರ್ಯಕ್ರಮ ಅಧಿಕಾರಿಯು ಜಿಲ್ಲಾ ಕಾರ್ಯಕ್ರಮ ಸಮನ್ವಯ ಅಧಿಕಾರಿಯ ನಿರ್ದೇಶನ, ನಿಯಂತ್ರಣ ಮತ್ತು ಮೇಲ್ವಿಚಾರಣೆಗೆ ಒಳಪಟ್ಟಿರುತ್ತಾರೆ. ಕಾರ್ಯಕ್ರಮ ಅಧಿಕಾರಿಗೆ ಸಹಾಯ ಮಾಡಲು ಪ್ರತಿ ತಾಲ್ಲೂಕು ಪಂಚಾಯಿತಿಯಲ್ಲಿ ಒಬ್ಬ ಸಹಾಯಕ ಕಾರ್ಯಕ್ರಮ ಅಧಿಕಾರಿಯನ್ನು ನಿಯೋಜನೆ ಅಥವಾ ಗುತ್ತಿಗೆ ಆಧಾರದ ಮೇಲೆ ಪೂರ್ಣಕಾಲಿಕವಾಗಿ ನೇಮಿಸಿಕೊಳ್ಳಲು ಅವಕಾಶವಿರುತ್ತದೆ.

**೩. ಜಿಲ್ಲಾ ಮಟ್ಟದಲ್ಲಿ**

ಜಿಲ್ಲಾ ಪಂಚಾಯಿತಿ ಒಳಗೊಂಡಂತೆ, ತಾಲ್ಲೂಕುಪಂಚಾಯಿತಿ ಮತ್ತು ಗ್ರಾಮ ಪಂಚಾಯಿತಿಗಳು ಈ ಯೋಜನೆಯಡಿ ಸಿದ್ದಪಡಿಸಿ ಸಲ್ಲಿಸುವ ಯೋಜನೆಗಳ ಪ್ರಸ್ತಾವನೆಗಳನ್ನು ಅನುಮೋದಿಸುವುದು ಜಿಲ್ಲಾ ಮತ್ತು ತಾಲ್ಲೂಕು ಮಟ್ಟದಲ್ಲಿ ಯೋಜನೆಯ ಅನುಷ್ಠಾನದ ಪರಿಶೀಲನೆ ಮತ್ತು ಮೇಲ್ವಿಚಾರಣೆಯನ್ನು ಜಿಲ್ಲಾಪಂಚಾಯಿತಿ ಮಾಡಬೇಕು. ಜಿಲ್ಲಾ ಪಂಚಾಯಿತಿಯ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ ಅವರು ಈ ಯೋಜನೆಯ ಜಿಲ್ಲಾ ಕಾರ್ಯಕ್ರಮ ಸಮನ್ವಯ ಅಧಿಕಾರಿಯಾಗಿರುತ್ತಾರೆ. ಜಿಲ್ಲಾ ಕಾರ್ಯಕ್ರಮ ಸಮನ್ವಯ ಅಧಿಕಾರಿಯಾಗಿ ತಾಲ್ಲೂಕು ಪಂಚಾಯಿತಿಯಿಂದ ಬಂದ ಕ್ರೋಡಿಕೃತ ಯೋಜನೆಗಳನ್ನು ಪರಿಶೀಲಿಸಿ ಜಿಲ್ಲಾ ಪಂಚಾಯಿತಿಯ ಅನುಮೋದನೆಗೆ ಮಂಡಿಸುತ್ತಾರೆ.

**ಜಿಲ್ಲಾ ಪಂಚಾಯಿತಿ ಜವಾಬ್ದಾರಿ**

ಪ್ರತಿ ಜಿಲ್ಲಾ ಪಂಚಾಯಿತಿಯು ಮುಂದಿನ ವರ್ಷ ಉದ್ಯೋಗದ ಬೇಡಿಕೆಗೆ ತಕ್ಕಂತೆ ಬೇಕಾಗುವ ಒಟ್ಟು ಕಾಮಗಾರಿಗಳ ಮೌಲ್ಯವನ್ನು ಲೆಕ್ಕ ಹಾಕಿ ಗ್ರಾಮ ಪಂಚಾಯಿತಿ, ತಾಲ್ಲೂಕು ಪಂಚಾಯಿತಿ ಮತ್ತು ಜಿಲ್ಲಾ ಪಂಚಾಯಿತಿಗಳು ಯಾವ ಮೊತ್ತಕ್ಕೆ ಕಾಮಗಾರಿಗಳನ್ನು ಗುರುತಿಸಬೇಕು ಎಂಬುದನ್ನು ಅವುಗಳಿಗೆ ಸೂಚಿಸಬೇಕು. ಪಂಚಾಯತ್ ರಾಜ್ ಸಂಸ್ಥೆಗಳಾದ ಗ್ರಾಮ ಪಂಚಾಯಿತಿ ತಾಲ್ಲೂಕು ಪಂಚಾಯಿತಿ, ಮತ್ತು ಜಿಲ್ಲಾ ಪಂಚಾಯಿತಿಗಳು ತಮ್ಮ ಪಾಲಿನ ಒಟ್ಟು ಕಾಮಗಾರಿಗಳ ವೆಚ್ಚದಲ್ಲಿ ಅಕುಶಲ ಕೂಲಿಗಾಗಿ ಮತ್ತು ಸಾಮಗ್ರಿಗಳಿಗಾಗಿ ೬೦:೪೦ (೬೦ ಕ್ಕಿಂತ ಜಾಸ್ತಿ ಮತ್ತು ೪೦ ಕ್ಕಿಂತ ಕಡಿಮೆ) ಅನುಪಾತವನ್ನು ಪಾಲನೆ ಮಾಡಬೇಕು. ಜಿಲ್ಲಾ ಪಂಚಾಯಿತಿಯು ತನ್ನ ಪಾಲಿನ ಮೊತ್ತಕ್ಕೆ ಕಾಮಗಾರಿಗಳ ಯೋಜನೆಯ ಪ್ರಸ್ತಾವನೆಯನ್ನು ಸಿದ್ದಪಡಿಸಬೇಕು. ಗ್ರಾಮ ಪಂಚಾಯಿತಿ ಮತ್ತು ತಾಲ್ಲೂಕು ಪಂಚಾಯಿತಿಗಳು ಸಲ್ಲಿಸಿದ ಕಾಮಗಾರಿಗಳ ಪಟ್ಟಿಯ ಆದ್ಯತೆಗಳನ್ನು, ಜಿಲ್ಲಾ ಪಂಚಾಯಿತಿ ಬದಲಾಯಿಸತಕ್ಕದ್ದಲ್ಲ. ಜಿಲ್ಲಾ ಪಂಚಾಯಿತಿಯು ಪರಿಗಣಿಸಿ ಅನುಮೋದಿಸಿದ ಜಿಲ್ಲಾ ಯೋಜನೆಯ ಎಲ್ಲ ಕಾಮಗಾರಿಗಳಿಗೆ ಜಿಲ್ಲಾ ಕಾರ್ಯಕ್ರಮ ಸಮನ್ವಯ ಅಧಿಕಾರಿ ಆಡಳಿತಾತ್ಮಕ ಮಂಜೂರಾತಿ ನೀಡಬೇಕು. ಆಡಳಿತಾತ್ಮಕ ಮಂಜೂರಾತಿ ನೀಡಿದ ಪ್ರತಿ ಕಾಮಗಾರಿಗೆ ಪ್ರತ್ಯೇಕವಾದ ಸಂಖ್ಯೆಯನ್ನು ನೀಡಿ, ಕಾಮಗಾರಿಗಳ ಪಟ್ಟಿಯನ್ನು ಸಂಬಂಧಿಸಿದ ಕಾರ್ಯಕ್ರಮ ಅಧಿಕಾರಿಗೆ ಕಳುಹಿಸಬೇಕು. ಜಿಲ್ಲಾ ಪಂಚಾಯಿತಿ ಅನುಮೋದನೆಯು ಒಳಗೊಂಡಂತೆ ಮುಂದಿನ ವರ್ಷಕ್ಕಾಗಿ ಅಗತ್ಯವಿರುವ ಎಲ್ಲ ಪ್ರಕ್ರಿಯೆಗಳು ಹಿಂದಿನ ವರ್ಷದ ಡಿಸೆಂಬರ್ ಕೊನೆಯ ವೇಳೆಗೆ ಮುಕ್ತಾಯಗೊಂಡಿರಬೇಕು. ಮುಂದಿನ ವರ್ಷಕ್ಕೆ ನಿರೀಕ್ಷಿಸಲಾಗುವ ಅಕುಶಲ ಉದ್ಯೋಗ ಬೇಡಿಕೆಯ

ಆಧಾರದ ಮೇಲೆ ಕೂಲಿ ಅಯವ್ಯಯವನ್ನು ಜಿಲ್ಲಾ ಕಾರ್ಯಕ್ರಮ ಸಮನ್ವಯಾಧಿಕಾರಿ ಸಿದ್ಧಪಡಿಸಬೇಕು. ಇದು ಯೋಜನೆಗಳನ್ನು ರೂಪಿಸಲು ಆಧಾರವಾಗಿರಬೇಕು.

**೪. ರಾಜ್ಯಮಟ್ಟ**

ರಾಜ್ಯಮಟ್ಟದಲ್ಲಿ ಈ ಯೋಜನೆಯ ಉಸ್ತುವಾರಿಯನ್ನು ನೋಡಿಕೊಳ್ಳುತ್ತಿರುವ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ಪ್ರಧಾನ ಕಾರ್ಯದರ್ಶಿ ಅವರು ರಾಜ್ಯ ಕಾರ್ಯಕ್ರಮ ಸಮನ್ವಯಾಧಿಕಾರಿ ಆಗಿರುತ್ತಾರೆ. ರಾಜ್ಯ ಉದ್ಯೋಗ ಪರಿಷತ್ತನ್ನು ರಚಿಸುವುದು. ಉದ್ಯೋಗ ಖಾತರಿ ನಿಧಿಯನ್ನು ಸ್ಥಾಪಿಸುವುದು, ರಾಜ್ಯದ ಪಾಲನ್ನು ಬಿಡುಗಡೆ ಮಾಡಲು ಅಗತ್ಯವಿರುವ ಅನುದಾನವನ್ನು ಆಯವ್ಯಯದಲ್ಲಿ ಒದಗಿಸುವುದು, ನಿಗದಿತ ಗ್ರಾಮೀಣ ದರಗಳ ಅನುಸೂಚಿ ಪ್ರಕಟಿಸುವುದು, ಯೋಜನೆಯ ಪರಿಣಾಮ ತಿಳಿಯಲು ಮೌಲ್ಯಮಾಪನ ಮಾಡಿಸುವುದು ರಾಜ್ಯಮಟ್ಟದ ಜವಾಬ್ದಾರಿಯಾಗಿರುತ್ತದೆ.

**೫. ಸರ್ಕಾರೇತರ (ಎನ್.ಜಿ.ಓ) ಸಂಸ್ಥೆಗಳ ಪಾತ್ರ**

ಈ ಯೋಜನೆಯಡಿ ಕೆಲಸ ಮಾಡುವ ಕಾರ್ಮಿಕರ ಹಕ್ಕುಗಳ ಸಂರಕ್ಷಣೆ ಸಾಮರ್ಥ್ಯಾಭಿವೃದ್ಧಿ ಸಾಮಾಜಿಕ ಲೆಕ್ಕ ಪರಿಶೋಧನೆ ಇತ್ಯಾದಿ ಪ್ರಕ್ರಿಯೆಗಳ ಮೇಲ್ವಿಚಾರಣೆಗೆ ಅನುಕೂಲವಾಗುವಂತೆ ಪಾಲುದಾರರಾಗಿ ಸರ್ಕಾರೇತರ ಸಂಸ್ಥೆಗಳು ಭಾಗವಹಿಸಬಹುದಾಗಿದೆ.

## ೪.೪. ವಿವಿಧ ಜಿಲ್ಲೆಗಳ ಅಂಕಿ ಅಂಶಗಳು

| ಕ್ರ.ಸಂ. | ಜಿಲ್ಲೆ | ಅನುದಾನ | ಖರ್ಚಾದ ಹಣ (ಕೋಟಿ ರೂ. ಗಳಲ್ಲಿ) | ಮಂಜೂರಾದ (ಕೋಟಿ ರೂ. ಗಳಲ್ಲಿ ಕಾಮಗಾರಿಗಳು) | ಪೂರ್ಣಗೊಂಡ ಕಾಮಗಾರಿಗಳು |
|---|---|---|---|---|---|
| ೧ | ಬಾಗಲಕೋಟೆ | ೩೨.೧೯ | ೧೦.೫೬ | ೮೮೪೫ | ೫೦೬ |
| ೨ | ಬೆಂಗಳೂರು ನಗರ | ೧೩.೨೦ | ೩.೪೯ | ೩೨೭೩ | ೨ |
| ೩ | ಬೆಂಗಳೂರು ಗ್ರಾಮಾಂತರ | ೧೬.೬೯ | ೩.೯೬ | ೪೩೪೫ | ೩೩೪ |
| ೪ | ಬೆಳಗಾವಿ | ೫೮.೯೦ | ೧೪.೦೧ | ೨೨೫೦೮ | ೯೬ |
| ೫ | ಬಳ್ಳಾರಿ | ೩೪.೬೩ | ೨೫.೬೧ | ೨೧೦೩೦ | ೨೬೬ |
| ೬ | ಬೀದರ್ | ೩೨.೦೭ | ೨೩.೩೫ | ೧೭೫೬೧ | ೪೯೪ |
| ೭ | ಬಿಜಾಪುರ | ೨೯.೩೨ | ೨.೩೮ | ೨೭೦೬೪ | ೪೪೮ |
| ೮ | ಚಿಕ್ಕಮಗಳೂರು | ೧೯.೮೨ | ೬.೦೯ | ೮೫೯೮ | ೮೧ |
| ೯ | ಚಿತ್ರದುರ್ಗ | ೪೫.೭೫ | ೨೮.೭೨ | ೧೨೭೦೧ | ೨ |
| ೧೦ | ದಕ್ಷಿಣ ಕನ್ನಡ | ೧೨.೭೪ | ೦.೫೬ | ೩೦೨೨೩ | ೨೫ |
| ೧೧ | ದಾವಣಗೆರೆ | ೪೨.೭೮ | ೩೬.೨೭ | ೧೨೯೦೩ | ೪೨೮ |
| ೧೨ | ಧಾರವಾಡ | ೨೨.೧೬ | ೮.೫೭ | ೯೫೭೯ | ೮೨೮ |
| ೧೩ | ಗದಗ | ೧೮.೨೮ | ೧.೭೭ | ೫೬೫೪ | ೦ |
| ೧೪ | ಗುಲ್ಬರ್ಗ | ೧೨೧.೭೩ | ೨೯.೫೪ | ೧೬೬೩೦ | ೮೯ |
| ೧೫ | ಹಾಸನ | ೨೧.೮೯ | ೨.೩೩ | ೮೧೧೮ | ೩೪೪ |
| ೧೬ | ಹಾವೇರಿ | ೪೨.೨೪ | ೧೦.೪೬ | ೫೯೧೯ | ೩೫೭ |
| ೧೭ | ಕೊಡಗು | ೯.೨೪ | ೨.೨೮ | ೫೨೬೩ | ೬೭ |
| ೧೮ | ಕೋಲಾರ | ೨೫.೫೫ | ೦.೦೭ | ೫೩೩೫೦ | ೭೭ |

| ೧೯ | ಕೊಪ್ಪಳ | ೩೩.೪೯ | ೨೩.೨೪ | ೪೦೪೬೯ | ೬೩೧೬ |
|---|---|---|---|---|---|
| ೨೦ | ಮಂಡ್ಯ | ೨೪.೯೦ | ೧.೬೬ | ೧೫೨೮೩ | ೨೦ |
| ೨೧ | ರಾಯಚೂರು | ೫೪.೮೫ | ೧೬.೩೫ | ೧೯೯೩೭ | ೫೪ |
| ೨೨ | ರಾಮನಗರ | ೨೨.೯೮ | ೦.೪೯ | ೨೧೮೮ | ೩ |
| ೨೩ | ಶಿವಮೊಗ್ಗ | ೩೭.೫೧ | ೨೧.೦೩ | ೨೦೦೭೧ | ೮೨೯ |
| ೨೪ | ತುಮಕೂರು | ೭೦.೪೪ | ೧೨.೦೫ | ೨೮೦೭೨ | ೫೬೫೭ |
| ೨೫ | ಉಡುಪಿ | ೩.೨೮ | ೦.೩೯ | ೩೬೫೦ | ೩೬ |
| ೨೬ | ಉತ್ತರ ಕನ್ನಡ | ೨೨.೮೮ | ೯.೯೭ | ೧೭೮೨೦ | ೮೭ |
| ೨೭ | ಯಾದಗಿರಿ | ೩೧.೬೦ | ೦.೩೭ | ೧೨೨೭೧ | ೦ |
| ೨೮ | ಚಾಮರಾಜನಗರ | ೧೪.೦೮ | ೦.೭೧ | ೫೯೯೪ | ೪೧೨ |
| ೨೯ | ಮೈಸೂರು | ೨೮.೦೬ | ೩.೬೪ | ೧೯೬೪೦ | ೯೬೬ |
| ೩೦ | ಚಿಕ್ಕಬಳ್ಳಾಪುರ | ೨೬.೫೮ | ೫.೧೮ | ೯೫೯೭ | ೧೫೦೭ |
|  | **ಒಟ್ಟು** | **೯೬೯.೮೩** | **೩೦೫.೧೦** | **೪೬೮೫೫೬** | **೨೦೩೩೧** |

ಉದ್ಯೋಗ ಸೃಷ್ಟಿಯನ್ನು ಗಮನದಲ್ಲಿಟ್ಟುಕೊಂಡು ಜನ ಸಹಭಾಗಿತ್ವ ಮೂಲಕ ಕಾಮಗಾರಿಗಳನ್ನು ಆಯ್ಕೆ ಮಾಡಿಕೊಂಡು ಪರಿಪೂರ್ಣವಾದ ಯೋಜನೆಗಳನ್ನು ಸಿದ್ಧಪಡಿಸಿ ಅನುಷ್ಠಾನಗೊಳಿಸಿದಲ್ಲಿ ಗ್ರಾಮೀಣ ಬಡತನ ನಿರ್ವಹಣೆಯಲ್ಲಿ ಪ್ರಮುಖ ಪಾತ್ರ ವಹಿಸುತ್ತದೆ. ಈ ಯೋಜನೆಯಲ್ಲಿ ಸೂಚಿಸಿರುವ ಕಾಮಗಾರಿಗಳು

೧. ಜಲ ಸಂರಕ್ಷಣೆ ಮತ್ತು ಮಳೆನೀರು ಕೊಯ್ಲು

೨. ಬರಗಾಲ ತಡೆಗಟ್ಟುವಿಕೆ

೩. ನೀರಾವರಿ

೪. ನೀರಾವರಿ ಸೌಲಭ್ಯ

೫. ನೀರಿನ ಮೂಲಗಳ ಪುನಶ್ಚೇತನ

೬. ಜಮೀನಿನ ಅಭಿವೃದ್ಧಿ

೭. ನೆರೆ, ಪ್ರವಾಹ ನಿಯಂತ್ರಣ ಮತ್ತು ತಡೆ

೮. ಸರ್ವಋತು ಗ್ರಾಮೀಣ ರಸ್ತೆ ನಿರ್ಮಾಣ

೯. ಕೇಂದ್ರ ಸರ್ಕಾರ ಸೂಚಿಸುವ ಕಾಮಗಾರಿಗಳು

**೧.೫. ದೇಶದ ವಿವಿಧ ರಾಜ್ಯಗಳಲ್ಲಿ ಜಾರಿಯಲ್ಲಿರುವ ಕೂಲಿದರ**

| ಕ್ರ.ಸಂ. | ರಾಜ್ಯ | ಕೂಲಿ ದರ |
|---|---|---|
| ೧ | ಅಸ್ಸಾಂ | ೧೩೦-೦೦ |
| ೨ | ಆಂಧ್ರ ಪ್ರದೇಶ | ೧೨೧-೦೦ |
| ೩ | ಅರುಣಾಚಲ ಪ್ರದೇಶ | ೧೧೮-೦೦ |
| ೪ | ಬಿಹಾರ | ೧೨೦-೦೦ |
| ೫ | ಗುಜರಾತ್ | ೧೨೪-೦೦ |
| ೬ | ಹಿಮಾಚಲ ಪ್ರದೇಶ | ೧೭೯-೦೦ |
| ೭ | ಜಮ್ಮು ಮತ್ತು ಕಾಶ್ಮೀರ | ೧೨೧-೦೦ |
| ೮ | ಕರ್ನಾಟಕ | ೧೨೫-೦೦ |
| ೯ | ಕೇರಳ | ೧೫೦-೦೦ |
| ೧೦ | ಮಧ್ಯ ಪ್ರದೇಶ | ೧೨೨-೦೦ |
| ೧೧ | ಮಹಾರಾಷ್ಟ್ರ | ೧೨೭-೦೦ |
| ೧೨ | ಮಣಿಪುರ | ೧೨೬-೦೦ |
| ೧೩ | ಮೇಘಾಲಯ | ೧೧೭-೦೦ |
| ೧೪ | ಮಿಜೋರಾಂ | ೧೨೯-೦೦ |
| ೧೫ | ನಾಗಾಲ್ಯಾಂಡ್ | ೧೧೮-೦೦ |
| ೧೬ | ಒರಿಸ್ಸಾ | ೧೨೫-೦೦ |
| ೧೭ | ಪಂಜಾಬ್ | ೧೨೪-೦೦ |
| ೧೮ | ರಾಜಸ್ಥಾನ | ೧೧೯-೦೦ |

| | | |
|---|---|---|
| ೧೯ | ಸಿಕ್ಕಿಂ | ೧೧೮-೦೦ |
| ೨೦ | ತಮಿಳುನಾಡು | ೧೧೯-೦೦ |
| ೨೧ | ತ್ರಿಪುರ | ೧೧೮-೦೦ |
| ೨೨ | ಉತ್ತರ ಪ್ರದೇಶ | ೧೨೦-೦೦ |
| ೨೩ | ಪಶ್ಚಿಮ ಬಂಗಾಳ | ೧೩೦-೦೦ |
| ೨೪ | ಛತ್ತೀಸ್‌ಗಡ | ೧೨೨-೦೦ |
| ೨೫ | ಜಾರ್ಖಂಡ್ | ೧೨೦-೦೦ |
| ೨೬ | ಉತ್ತರಾಖಂಡ | ೧೨೦-೦೦ |
| ೨೭ | ಗೋವಾ | ೧೩೮-೦೦ |
| ೨೮ | ಅಂಡಮಾನ್ | ೧೭೦-೦೦ |
| ೨೯ | ನಿಕೋಬಾರ್ | ೧೮೧-೦೦ |
| ೩೦ | ದಾದ್ರಾ ಮತ್ತು ನಗರ್ ಹವೇಲಿ | ೧೩೮-೦೦ |
| ೩೧ | ಡಾಮನ್ ಮತ್ತು ಡಯು | ೧೨೬-೦೦ |
| ೩೨ | ಲಕ್ಷದ್ವೀಪ | ೧೩೮-೦೦ |
| ೩೩ | ಪಾಂಡಿಚೇರಿ | ೧೧೯-೦೦ |
| ೩೪ | ಚಂಡೀಗಢ | ೧೭೪-೦೦ |

**೪.೬. ಹಣಕಾಸು ನಿರ್ವಹಣೆ ಮತ್ತು ಅನುದಾನ**

ಯಾವುದೇ ಯೋಜನೆಯನ್ನು ಯಶಸ್ವಿಯಾಗಿ ಅನುಷ್ಠಾನಗೊಳಿಸಬೇಕಾದರೆ ಆ ಯೋಜನೆಯಲ್ಲಿ ತೊಡಗಿಸಿರುವ ಹಣಕಾಸಿನ (ಬಿಡುಗಡೆ ಮಾಡಿರುವ ಅನುದಾನ) ಸಮರ್ಪಕ ನಿರ್ವಹಣೆ ಅತ್ಯಂತ ಪ್ರಮುಖ ಪಾತ್ರ ವಹಿಸುತ್ತದೆ. ಹಣಕಾಸಿನ ನಿರ್ವಹಣೆಯಲ್ಲಿ ಲೋಪ ಉಂಟಾದಾಗ ಯೋಜನೆಯ ಆಶಯ ಮತ್ತು ಉದ್ದೇಶಗಳು ಪೂರ್ಣ ಪ್ರಮಾಣದಲ್ಲಿ ಫಲಿಸುವುದಿಲ್ಲ.

ಯೋಜನೆಯ ಅನುಷ್ಠಾನಕ್ಕೆ ಬೇಕಾಗುವ ಅನುದಾನ ಶೆ. ೯೦ ರಷ್ಟನ್ನು ಕೇಂದ್ರ ಸರ್ಕಾರ ಹಾಗೂ ಶೇ.೧೦ ರಷ್ಟನ್ನು ರಾಜ್ಯ ಸರ್ಕಾರ ಒದಗಿಸುತ್ತವೆ. ಯೋಜನಾ ಕಾಮಗಾರಿಗಳಲ್ಲಿ ಪಾಲ್ಗೊಳ್ಳುವ ಅಕುಶಲ

ಕಾರ್ಮಿಕರ ಕೂಲಿ ವೆಚ್ಚದ ಶೇ.೧೦೦ ರಷ್ಟನ್ನು ಕೇಂದ್ರ ಸರ್ಕಾರದ ಅನುದಾನದಲ್ಲಿ ಭರಿಸಲಾಗುವುದು. ಇದರಲ್ಲಿ ಯೋಜನಾ ಅನುಷ್ಠಾನಕ್ಕೆ ಬೇಕಾದ ಸಾಮಗ್ರಿ, ಕುಶಲ ಮತ್ತು ಅರೆ ಕುಶಲ ಕಾರ್ಮಿಕರ ಕೂಲಿ, ಯಂತ್ರೋಪಕರಣಗಳ ವೆಚ್ಚ ಸೇರಿವೆ.

ಕೇಂದ್ರ ಸರ್ಕಾರದ ಅನುದಾನದಲ್ಲಿ ಒಟ್ಟು ಸಾಮಗ್ರಿ ವೆಚ್ಚ ಶೇ.೭೫% ರಷ್ಟನ್ನು ಭರಿಸಲಾಗುವುದು. ರಾಜ್ಯ ಸರ್ಕಾರದ ಅನುದಾನದಿಂದ ಶೇ.೨೫% ರಷ್ಟನ್ನು ಭರಿಸಲಾಗುವುದು.

**ಅನುದಾನ ಹಂಚಿಕೆ**

ಗ್ರಾಮ ಪಂಚಾಯಿತಿಯ ಬೇಡಿಕೆ ಮತ್ತು ವಿನಿಯೋಗಕ್ಕೆ ಅನುಗುಣವಾಗಿ ಕಾರ್ಯಕ್ರಮ ಅಧಿಕಾರಿಯು ಅನುದಾನ ಬಿಡುಗಡೆ ಮಾಡುತ್ತಾರೆ.

ತಾಲ್ಲೂಕು ಪಂಚಾಯಿತಿಯ ಬೇಡಿಕೆ ಮತ್ತು ವಿನಿಯೋಗಕ್ಕೆ ಅನುಗುಣವಾಗಿ ಜಿಲ್ಲಾ ಕಾರ್ಯಕ್ರಮ ಸಮನ್ವಯ ಅಧಿಕಾರಿಗಳು ಕಾರ್ಯಕ್ರಮ ಅಧಿಕಾರಿಗಳಿಗೆ ಅನುದಾನ ಬಿಡುಗಡೆ ಮಾಡುತ್ತಾರೆ.

ಜಿಲ್ಲಾ ಕಾರ್ಯಕ್ರಮ ಸಮನ್ವಯ ಅಧಿಕಾರಿ, ರಾಜ್ಯ ಸರ್ಕಾರದ ಮೂಲಕ ಸಲ್ಲಿಸುವ ಬೇಡಿಕೆ ಮತ್ತು ವಿನಿಯೋಗಕ್ಕೆ ಅನುಗುಣವಾಗಿ ಕೇಂದ್ರ ಸರ್ಕಾರದಿಂದ ಅನುದಾನವನ್ನು ನೇರವಾಗಿ ಜಿಲ್ಲೆಗಳಿಗೆ ಬಿಡುಗಡೆ ಮಾಡಲಾಗುತ್ತದೆ. ಇದರ ಜೊತೆಯಲ್ಲೆ ರಾಜ್ಯ ಸರ್ಕಾರವು ತನ್ನ ಪಾಲಿನ ಅನುದಾನವನ್ನು ಜಿಲ್ಲೆಗಳಿಗೆ ಬಿಡುಗಡೆ ಮಾಡುತ್ತದೆ.

**೨೦೧೦-೧೧ ನೇ ಸಾಲಿನ ಹಣಕಾಸು ಅನುದಾನದ ವಿವರ**

೨೦೧೦-೧೧ ನೇ ಸಾಲಿನಲ್ಲಿ ಕೇಂದ್ರ ಸರ್ಕಾರ ದೇಶದಾದ್ಯಂತ ಈ ಯೋಜನೆಗೆ ನೀಡಲು ತನ್ನ ಬಜೆಟ್‌ನಲ್ಲಿ ೪೦,೦೦೦ ಕೋಟಿ ರೂ. ಗಳ ಹಣವನ್ನು ಇಡಲಾಗಿದೆ. ಈ ಹಿನ್ನೆಲೆಯಲ್ಲಿ ರಾಜಸ್ಥಾನ ಮಾತ್ರ ೬೦೦೦ ಕೋಟಿ ರೂ.ಗಳನ್ನು ಸದ್ಬಳಿಕೆ ಮಾಡಿಕೊಂಡು ಉತ್ತಮ ಸಾಧನೆ ಮಾಡಿದೆ. ಕೃಷಿ ಕಾರ್ಮಿಕರಿಗೆ ಕೆಲಸ ಗ್ರಾಮದ ಸಂಪತ್ತು ರಕ್ಷಿಸುವುದು, ಚೆಕ್‌ಡ್ಯಾಂಗಳ ನಿರ್ಮಾಣ, ಶಾಲೆಗಳಿಗೆ ಕಾಂಪೌಂಡ್ ನಿರ್ಮಾಣ ಸೇರಿದಂತೆ ಅನೇಕ ಜನೋಪಯೋಗಿ ಕಾರ್ಯಕ್ರಮಗಳನ್ನು ಕೈಗೊಳ್ಳಲಾಗಿದೆ.

ಆದರೆ ಕರ್ನಾಟಕಕ್ಕೆ ಬಿಡುಗಡೆ ಮಾಡಿರುವ ಅನುದಾನವನ್ನು ಸರಿಯಾಗಿ ವಿನಿಯೋಗಿಸಿಕೊಳ್ಳದೇ ಕರ್ನಾಟಕದಲ್ಲಿ ಪ್ರಗತಿ ಕುಂಠಿತವಾಗಿದೆ. ವಿವಿಧ ಕೇಂದ್ರ ಪುರಸ್ಕೃತ ಯೋಜನೆಗಳಲ್ಲಿ ಕರ್ನಾಟಕಕ್ಕೆ ೧೬,೦೦೦ ಕೋಡಿ ರೂ. (೨೦೧೦-೧೧ ರಲ್ಲಿ) ಬಂದಿದ್ದರೂ ಸಮರ್ಪಕವಾಗಿ ಅನುಷ್ಠಾನಗೊಂಡಿಲ್ಲ. ಈ ಆರ್ಥಿಕ

ವರ್ಷದಲ್ಲಿ ಕರ್ನಾಟಕಕ್ಕೆ ಮಹಾತ್ಮಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತ್ರಿ ಯೋಜನೆಯಲ್ಲಿ ಬಿಡುಗಡೆಯಾಗಿರುವ ಮತ್ತು ಖರ್ಚಾಗಿರುವ ಹಣಕಾಸಿನ ವಿವರ.

ಹಣಕಾಸು ನಿರ್ವಹಣೆಗೆ ಸಂಬಂಧಿಸಿದ ವಿಷಯಗಳಲ್ಲಿ ಸರ್ಕಾರಿ ಸಿಬ್ಬಂದಿಯವರು ಪೂರ್ಣ ಜವಾಬ್ದಾರರು ಎಂಬ ಧೋರಣೆ ಜನ ಪ್ರತಿನಿಧಿಗಳಲ್ಲಿ ಸರ್ವೆ ಸಾಮಾನ್ಯ. ಆದರೆ ಯೋಜನೆಯ ಅನುಷ್ಠಾನಕ್ಕೆ ಸಂಬಂಧಿಸಿದಂತೆ ಅಧ್ಯಕ್ಷರು, ಉಪಾಧ್ಯಕ್ಷರು, ಸ್ಥಾಯಿ ಸಮಿತಿ ಅಧ್ಯಕ್ಷರು, ಸದಸ್ಯರು ಎಲ್ಲರಿಗೂ ಹಣಕಾಸಿನ ಬಾಧ್ಯತೆಗಳಲ್ಲಿ ನಿರ್ಣಯ ತೆಗೆದುಕೊಳ್ಳುವಂತಹ ಪ್ರಸಂಗಗಳಲ್ಲಿ ಹಣಕಾಸಿನ ನಿಯಮಗಳ ತಿಳುವಳಿಕೆ ಅತ್ಯವಶ್ಯಕವಾಗಿರುತ್ತದೆ. ಯಾವುದೇ ತಪ್ಪು ನಿರ್ಣಯಗಳಿಂದ ಉಂಟಾಗುವ ಆರ್ಥಿಕ ನಷ್ಟಕ್ಕೆ ಇಂತಹ ನಡವಳಿಕೆಗಳಲ್ಲಿ ಭಾಗಿಯಾಗಿರುವ ಎಲ್ಲರೂ ಜವಾಬ್ದಾರರಾಗಿರುತ್ತಾರೆ.

ಆದ್ದರಿಂದ ಕರ್ನಾಟಕ ಪಂಚಾಯಿತಿರಾಜ್ ಅಧಿನಿಯಮ ಪ್ರಕರಣ ೨೮೬ರ ಪ್ರಕಾರ ಎಲ್ಲಾ ಚುನಾಯಿತ ಸದಸ್ಯರನ್ನು ಸರ್ಕಾರಿ ಉದ್ಯೋಗಿಗಳ ರೀತಿಯಲ್ಲಿಯೇ ಭಾರತ ದಂಡ ಸಂಹಿತೆ ೨೧ನೇ ಪ್ರಕರಣದಂತೆ ಮತ್ತು ಭ್ರಷ್ಟಾಚಾರ ನಿವಾರಣೆ ಅಧಿನಿಯಮ ೧೯೮೮ರಲ್ಲಿ ಅರ್ಥೈಸಿರುವಂತೆ "ಲೋಕ ನೌಕರ" ಎಂದು ಪರಿಗಣಿಸಲಾಗಿದೆ.

ಸರ್ಕಾರಿ ಯೋಜನೆಗಳ ಉತ್ತಮ ಅನುಷ್ಠಾನ ಆಗಬೇಕಾದರೆ ಸರ್ಕಾರಿ ಅಧಿಕಾರಿಗಳು, ಜನ ಪ್ರತಿನಿಧಿಗಳು ಮತ್ತು ಸಾರ್ವಜನಿಕರು ಸಹಕಾರ, ಸಂಯೋಜನೆಯಿಂದ ಕೆಲಸ ನಿರ್ವಹಿಸಿದರೆ ಅನುದಾನಗಳನ್ನು ಸದ್ಬಳಕೆ ಮಾಡಿಕೊಂಡು ಉತ್ತಮ ಅಭಿವೃದ್ಧಿ ಸಾಧಿಸಬಹುದು. ಅದರಲ್ಲೂ ವಿಶೇಷವಾಗಿ 'ಮಹಾತ್ಮಗಾಂಧಿ ರಾಷ್ಟ್ರೀಯ ಉದ್ಯೋಗ ಖಾತ್ರಿ ಯೋಜನೆಯನ್ನು ಸದ್ಬಳಕೆ ಮಾಡಿಕೊಂಡಿದ್ದೆ ಆದರೆ ಗ್ರಾಮೀಣ ಪ್ರದೇಶದಲ್ಲಿ ಆರ್ಥಿಕ ಅಸಮಾನತೆ ನಿರ್ಮೂಲನೆ ಮಾಡಿ ಸಮಾನತೆ ಸಾಧಿಸಿ "ಗ್ರಾಮಸ್ವರಾಜ್" ಸಾಧಿಸಬಹುದು.

## ೪.೭. ಹೆಬ್ರಿ ಗ್ರಾಮ ಪಂಚಾಯತ್

## ೨೦೦೯–೧೦ನೇ ಸಾಲಿನ ಮಹಾತ್ಮಾ ಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯ ವಾರ್ಷಿಕ ವರದಿ

## ಘೋಷ್ವಾರೆ

೪.೭.೧

| ಆರಂಭದ ಶಿಲ್ಕು | ಜಮೆ | ಒಟ್ಟು ಜಮೆ | ಕಾಮಗಾರಿ ವೆಚ್ಚ | ಇತರ ವೆಚ್ಚ | ಗ್ರಾ.ಪಂ.ಗೆ ಹೊಂದಾಣಿಕೆ | ಒಟ್ಟು ಖರ್ಚು | ಉಳಿಕೆ |
|---|---|---|---|---|---|---|---|
| ೧೦೭೬೧೮.00 | ೧೨೨೦೪೧೫.00 | ೧೩೨೮೦೩೩.00 | ೧೧೫೮೯೦.00 | ೧೮೭೩೫.00 | ೧೦೦೦೦೦.00 | ೨೩೪೬೨೫.00 | ೯೩೪೦೮.00 |

| ೩ | ತೋಟಗಾರಿಕೆ | ೧) ಬೀಜು ಪ್ರಜಾರಿ ಜಮೀನಿನಲ್ಲಿ ಅಡಿಕೆ ಬಾಳೆ ನಾಟಿ. | ೧೩೦೪೪ | ೭೨೪೫ | – | ೭೨೪೫ | ಸಂಪೂರ್ಣ |
|---|---|---|---|---|---|---|---|
| | | ೨) ಮಂದಾರ ಶೆಟ್ಟಿ ಜಮೀನಿನಲ್ಲಿ ಅಡಿಕೆ ಬಾಳೆ ಗಿಡನಾಟಿ. | ೯೦೦೭ | ೫೮೦೦ | – | ೫೮೦೦ | ಸಂಪೂರ್ಣ |
| | | ೩) ಎಚ್.ಕೆ. ನಾರಾಯಣ ನಾಯ್ಕ ಜಮೀನಿನಲ್ಲಿ ಅಡಿಕೆ ಬಾಳೆ ನಾಟಿ | ೧೩೪೯೬ | ೭೯೨೦ | – | ೭೯೨೦ | ಸಂಪೂರ್ಣ |
| | | ೪) ಸುಮಿತ್ರ ಹೆಗ್ಡೆ ಜಮೀನಿನಲ್ಲಿ ಅಡಿಕೆ ಬಾಳೆ ನಾಟಿ | ೯೬೦೦ | ೭೨೩೨ | – | ೭೨೩೨ | ಸಂಪೂರ್ಣ |
| | | ೫) ನೀಲು ಹಾಂಡ್ತಿ ಜಮೀನಿನಲ್ಲಿ ಅಡಿಕೆ ಬಾಳೆ ನಾಟಿ | ೬೦೧೯ | ೪೯೨೦ | – | ೪೯೨೦ | ಸಂಪೂರ್ಣ |
| | | ೬) ಸತೀಶ್ ಹೆಬ್ಬಾರ್ ಜಮೀನಿನಲ್ಲಿ ಅಡಿಕೆ ಬಾಳೆ ನಾಟಿ | ೫೯೮೬ | ೫೫೦೦ | – | ೫೫೦೦ | ಸಂಪೂರ್ಣ |
| | | ೭) ಚಾರ ಹೆರ್ಗಲ್ಲು ಅಣ್ಣಯ್ಯ ಪೂಜಾರಿ ಜಮೀನಿನಲ್ಲಿ ತೆಂಗು ಅಡಿಕೆ ನಾಟಿ | ೮೧೫೭ | ೯೦೦೦ | – | ೯೦೦೦ | ಸಂಪೂರ್ಣ |
| | | ೮) ಭಾಸ್ಕರ ಶೆಟ್ಟಿ ಹೆರ್ಗಲ್ಲು ಚಾರಾ ತೆಂಗು ಅಡಿಕೆ ನಾಟಿ | ೬೯೧೮ | ೬೦೪೮ | – | ೬೦೪೮ | ಸಂಪೂರ್ಣ |
| | | ೯) ಅಮ್ಮಣಿ ಪೂಜಾರ್ತಿ ಹೆರ್ಗಲ್ಲು ಅಡಿಕೆ ಬಾಳೆ ನಾಟಿ | ೬೯೧೮ | ೫೪೭೨ | – | ೫೪೭೨ | ಸಂಪೂರ್ಣ |
| | | ೧೦) ಸಾಧು ಹೆಗ್ಡೆ ಹಾಡಿಮನೆ ಅಡಿಕೆ ಬಾಳೆ ನಾಟಿ | ೩೯೨೩ | ೩೭೪೪ | – | ೩೭೪೪ | ಸಂಪೂರ್ಣ |
| | | ೧೧) ವಸಂತಿ ಹೆಗ್ಡೆ ಬಚ್ಚಪ್ಪು ತೆಂಗು ಅಡಿಕೆ ಗಿಡ ನಾಟಿ | ೭೦೯೭ | ೫೬೭೦ | – | ೫೬೭೦ | ಸಂಪೂರ್ಣ |
| | | ೧೨) ಲಿಂಗ ನಾಯ್ಕ ಅವರ ಜಮೀನಿನಲ್ಲಿ ಅಡಿಕೆ ಬಾಳೆ ನಾಟಿ | ೬೦೦೦ | ೫೮೦೦ | – | ೫೮೦೦ | ಸಂಪೂರ್ಣ |
| | | ೧೩) ರುಕ್ಮಿಣಿ ಹೆಗ್ಡೆ ಜಮೀನಿನಲ್ಲಿ ಅಡಿಕೆ ತೆಂಗು ನಾಟಿ | ೬೦೦೦ | ೪೯೯೫ | – | ೪೯೯೫ | ಸಂಪೂರ್ಣ |
| | | ಒಟ್ಟು | | ೭೯೩೪೬ | – | ೭೯೩೪೬ | ಸಂಪೂರ್ಣ |

| | | | | | | | |
|---|---|---|---|---|---|---|---|
| ೪ | ರೇಷ್ಮೆ | ೧) ಸದಾಶಿವ ಶೆಟ್ಟಿಗಾರ್ ಹಿಪ್ಪು ನೇರಳೆ ನಾಟಿ | ೬೦೬೮ | ೩೬೯೦ | – | ೩೬೯೦ | ಸಂಪೂರ್ಣ |
| | | ೨) ಕೃಷ್ಣ ಶೆಟ್ಟಿಗಾರ್ ತೋಟದಲ್ಲಿ ಹಿಪ್ಪು ನೇರಳೆ ನಾಟಿ | ೬೦೬೮ | ೪೪೨೮ | – | ೪೪೨೮ | ಸಂಪೂರ್ಣ |
| | | ೩) ವೀರಪ್ಪ ಶೆಟ್ಟಿಗಾರ್ ಜಮೀನಿನಲ್ಲಿ ಹಿಪ್ಪು ನೇರಳೆ ನಾಟಿ | ೬೦೬೮ | ೪೪೨೮ | – | ೪೪೨೮ | ಸಂಪೂರ್ಣ |
| | | ೪) ಲೀಲಾ ಶೆಟ್ಟಿಗಾರ್ ಜಮೀನಿನಲ್ಲಿ ಹಿಪ್ಪು ನೇರಳೆ ನಾಟಿ | ೬೦೬೮ | ೪೪೨೮ | – | ೪೪೨೮ | ಸಂಪೂರ್ಣ |
| | | ೫) ಶೀನ ಪೂಜಾರಿ ಜಮೀನಿನಲ್ಲಿ ಹಿಪ್ಪು ನೇರಳೆ ನಾಟಿ | ೬೦೬೮ | ೪೪೨೮ | – | ೪೪೨೮ | ಸಂಪೂರ್ಣ |
| | | ಒಟ್ಟು | | ೨೧೪೦೨ | – | ೨೧೪೦೨ | ಸಂಪೂರ್ಣ |
| ೫ | ಪಂ.ರಾಜ್ ಇಂಜಿನಿಯರಿಂಗ್ | ೧) ಸಾಂತೋಳ್ಳಿ ಪಾರ್ವತಿ ಹೆಗ್ಡೆ ಮನೆ ಬಳಿ ರಸ್ತೆ ಪ್ರವಾಹ ನಿಯಂತ್ರಣ | ೯೨೦೦೦ | ೫೧೬೬೦ | – | ೫೧೬೬೦ | ಸಂಪೂರ್ಣ |
| | | ೨) ಮಹಿಷ ಮರ್ದಿನಿ ದೇವಸ್ಥಾನ ರಸ್ತೆಯ ಪ್ರವಾಹ ನಿಯಂತ್ರಣ | ೮೦೦೦೦ | ೩೩೫೫೦ | ೮೨೫ | ೩೪೩೭೫ | ಸಂಪೂರ್ಣ |
| | | ೩) ಹಸಿಕೊಡ್ಲುವಿನಿಂದ ಹುತ್ತುರ್ಕೆ ರಸ್ತೆ ಬದಿ ಪ್ರವಾಹ ನಿಯಂತ್ರಣ | ೩೩೦೦೦೦ | ೧೦೨೯೨೦ | ೪೯೦೬೭ | ೧೫೧೯೮೭ | ಸಂಪೂರ್ಣ |
| | | ೪) ಮಣಿ ಬಚ್ಚಲು ರಸ್ತೆ ಬದಿ ಪ್ರವಾಹನ ನಿಯಂತ್ರಣ | ೧೭೫೦೦೦೦ | ೫೦೭೬೦ | ೧೨೬೯ | ೫೨೦೨೯ | ಸಂಪೂರ್ಣ |
| | | ೫) ಹೆಬ್ರಿ ಏಳಾಳಿ ರಸ್ತೆ ಬದಿ ಪ್ರವಾಹ ನಿಯಂತ್ರಣ | ೭೪೦೦೦ | ೩೨೪೦೦ | ೮೧೦ | ೩೩೨೧೦ | ಸಂಪೂರ್ಣ |
| | | ೬) ಸಣ್ಣ ಮನೆ ಬಳಿ ಗದ್ದೆ ತೋಡಿಗೆ ಅಡ್ಡಲಾಗಿ ತಡೆಗೋಡೆ ರಚನೆ | ೩೬೫೦೦ | ೨೮೯೧೭ | ೨೦೦೫೮ | ೪೮೯೭೫ | ಸಂಪೂರ್ಣ |
| | | ೭) ಹೆಬ್ರಿ ಇಕೊಡ್ಲು ರಸ್ತೆ ಬದಿ ಪ್ರವಾಹ ನಿಯಂತ್ರಣ | ೭೫೦೦೦ | ೩೯೮೫೨ | ೯೭೨ | ೪೦೮೨೪ | ಸಂಪೂರ್ಣ |
| | | ೮) ಹೆಬ್ರಿ ಕುಡ್ತೂರು ಬಯಲು ತೋಡಿಗೆ ಬದಿಕಟ್ಟುವುದು | ೯೬೦೦೦ | ೨೩೦೪೦ | ೨೩೨೨೮ | ೪೬೨೬೮ | ಸಂಪೂರ್ಣ |
| | | ೯) ಚಾರಾ ಮಾವಿನಕಟ್ಟೆ ಕಾರಾಡಿ ರಸ್ತೆ ಅಭಿವೃದ್ಧಿ | ೩೫೦೦೦ | ೩೪೫೬೦ | – | ೩೪೫೬೦ | ಸಂಪೂರ್ಣ |
| | | ೧೦) ಚಾರಾ ಕಾರಾಡಿಯಿಂದ ಬೋಳುಗುಡ್ಡೆ ರಸ್ತೆ ಬದಿಕಟ್ಟುವುದು. | ೧೦೦೦೦ | ೯೯೫೩ | – | ೯೯೫೩ | ಸಂಪೂರ್ಣ |

| | | | | | | | |
|---|---|---|---|---|---|---|---|
| | | ೧೧) ತಾರಿಮರ ಹೊಂಡ ಹಸಿಕೊಡ್ಲು ರಸ್ತೆ ಬದಿಕಟ್ಟುವುದು. | ೫೦೦೦೦ | ೩೮೭೪೫ | ೪೭೬೯ | ೪೩೫೧೪ | ಸಂಪೂರ್ಣ |
| | | ೧೨) ಚಾರಾ ಬಸದಿ ರಸ್ತೆಯಲ್ಲಿ ಪ್ರವಾಹ ನಿಯಂತ್ರಣ | ೧೯೦೦೦೦ | ೩೩೪೫೬ | ೮೧೬ | ೩೪೨೭೨ | |
| | | ೧೩) ಚಾರಾ ವಂಡಾರಬೆಟ್ಟು ರಸ್ತೆಯಲ್ಲಿ ಪ್ರವಾಹ ನಿಯಂತ್ರಣ | ೧೩೫೦೦೦೦ | ೩೩೧೮೪ | ೮೧೬ | ೩೪೦೦೦ | |
| | | ೧೪) ಜಿ.ಪಂ. ಹಿ.ಪ್ರಾ.ಶಾಲೆ ಗಾಂಧಿನಗರ ಮೈದಾನ ಸಮತಟ್ಟು | ೧೫೦೦೦ | ೬೧೫೦ | ೧೩೫ | ೬೨೮೫ | |
| | | ೧೫) ಆರೋಗ್ಯ ಕೇಂದ್ರದ ಆವರಣದೊಳಗಿನ ಮಣ್ಣು ಸಮತಟ್ಟುಗೊಳಿಸುವುದು. | ೨೧೦೦೦೦ | ೯೬೩೦೮ | ೨೩೮೮ | ೯೮೬೯೬ | |
| | | ೧೬) ಆರೋಗ್ಯ ಕೇಂದ್ರದ ಆವರಣದೊಳಗಿನ ಮಣ್ಣು ಸಮತಟ್ಟುಗೊಳಿಸುವುದು. | ೪೨೪೫ | ೪೩೨೪ | ೧೫೬೦ | ೫೮೮೪ | |
| | | ೧೭) ಜಿ.ಪಂ. ಹಿ.ಪ್ರಾ.ಶಾಲೆ ವಂಡಾರಬೆಟ್ಟು ಶಾಲೆಯ ಮೈದಾನ ಸಮತಟ್ಟು | ೧೦೦೦೦ | ೬೯೬೦ | ೧೭೪ | ೭೧೩೪ | |
| | | ೧೮) ಚಾರಾ ಕೂತಾಡಿಯಿಂದ ಹೊಸ ಮನೆಗೆ ಹೋಗುವ ರಸ್ತೆ ಬದಿ ಪ್ರವಾಹ ನಿಯಂತ್ರನ | ೧೦೦೦೦ | ೯೯೯ | – | ೯೯೯ | |
| | | ೧೯) ಕನ್ಯಾನ ಗಿಲ್ಲಾಳಿ ರಸ್ತೆ ಪ್ರವಾಹ ನಿಯಂತ್ರಣ ಕಾಲುವೆ ರಚನೆ | ೪೦೦೦೦೦ | ೫೦೨೨೦ | ೩೩೨೬೪ | ೮೩೪೮೪ | |
| | | ೨೦) ಚಾರ ಬಸ್ತಿ ಹಡವರ ಬೈಲು ರಸ್ತೆ ಬದಿ ಪ್ರವಾಹ ನಿಯಂತ್ರಣ | | – | ೬೭೨೦ | ೬೭೨೦ | |
| | | **ಒಟ್ಟು** | | ೬೮೬೯೪೯ | ೧೪೬೮೭೧ | ೮೩೩೮೨೦ | |
| | | **ಒಟ್ಟು ಜುಮ್ಲಾ** | | ೯೬೨೬೫೩ | ೧೫೩೨೩೭ | ೧೧೧೫೮೯೦ | |

### ೪.೭.೩ ಘೋಷ್ವಾರೆ

| | | |
|---|---|---|
| ೧) ಅರಣ್ಯ ಇಲಾಖೆ | – | ೧೮೧೩೨೨ |
| ೨) ತೋಟಗಾರಿಕೆ ಇಲಾಖೆ | – | ೭೯೩೪೬ |
| ೩) ರೇಷ್ಮೆ ಇಲಾಖೆ | – | ೨೧೪೦೨ |
| ೪) ಪಂ.ರಾಜ್ ಇಂಜಿನಿಯರ್ ಇಲಾಖೆ | – | ೮೩೩೮೨೦ |
| ಒಟ್ಟು | – | ೧೧೧೫೮೯೦ |

# ಅಧ್ಯಾಯ – ೫

# ಆರ್ಥಿಕ ಮತ್ತು ಆರ್ಥಿಕೇತರ ಪರಿಣಾಮಗಳು

## ೫.೧. ಪ್ರವೇಶ

ಆರ್ಥಿಕಾಭಿವೃದ್ಧಿಯಲ್ಲಿ ಗ್ರಾಮೀಣ ಅಭಿವೃದ್ಧಿಯು ಮಹತ್ವದ ಪಾತ್ರವನ್ನು ವಹಿಸುತ್ತದೆ. ಹಳ್ಳಿಗಳಲ್ಲಿ ಬಡತನವನ್ನು ನಿರ್ಮೂಲನೆ ಮಾಡುವಲ್ಲಿ ಉದ್ಯೋಗ ಖಾತರಿ ಯೋಜನೆಯು ಒಂದು ಪರಿಣಾಮಕಾರಿ ಸಾಧನವನ್ನಾಗಿ ಪರಿಗಣಿಸಲಾಗಿದೆ. ಬಡತನ ನಿರ್ಮೂಲನೆ, ಉದ್ಯೋಗ ಸೃಷ್ಟಿ, ಮಹಿಳಾ ಸಬಲೀಕರಣ, ಸಾಮಾಜಿಕ ನ್ಯಾಯದಂತಹ ಪ್ರಾಥಮಿಕ ಜವಾಬ್ದಾರಿಯನ್ನು ಸಹ ಈ ಯೋಜನೆಯು ಒಳಗೊಂಡಿದೆ. ಉದ್ಯೋಗ ಖಾತರಿ ಯೋಜನೆಯು ಹಳ್ಳಿಗಳ ಸಾಮಾಜಿಕ, ಆರ್ಥಿಕ, ಆರ್ಥಿಕೇತರ ಪರಿವರ್ತನೆಯ ಪ್ರೇರಕ ಶಕ್ತಿಯಾಗಿದೆ. (ಮನಮೋಹನ್‌ಸಿಂಗ್) ಆರ್ಥಿಕ ಅಭಿವೃದ್ಧಿಯ ವೇಗವನ್ನು ಹೆಚ್ಚಿಸುವ ದೃಷ್ಟಿಯಿಂದ ಲಭ್ಯವಿರುವ ದುಡಿಯುವ ವರ್ಗವನ್ನು ಪೂರ್ಣ ಪ್ರಮಾಣದಲ್ಲಿ ಬಳಸಿಕೊಳ್ಳುವ ಅವಶ್ಯಕತೆ ಇದೆ. ಮಾನವ ಸಂಪನ್ಮೂಲದ ಪೂರ್ಣ ಪ್ರಮಾಣದ ಬಳಕೆಯು ಇಂದಿನ ಅವಶ್ಯಕವಾಗಿದ್ದು ಉದ್ಯೋಗ ಖಾತರಿ ಯೋಜನೆಯು ಇದಕ್ಕೆ ನೆರವಾಗುತ್ತದೆ.

ಬಡತನ ನಿರುದ್ಯೋಗವೆಂಬ ಅವಳಿ ಸಮಸ್ಯೆಗಳು ರಾಷ್ಟ್ರವೊಂದರ ಸಾಮಾಜಿಕ ಮತ್ತು ಆರ್ಥಿಕ ಆರ್ಥಿಕೇತರ ಅಭಿವೃದ್ಧಿಯ ಮೇಲೆ ತೀವ್ರ ಪ್ರಭಾವವನ್ನು ಬೀರುತ್ತವೆ. ಗ್ರಾಮೀಣ ಪ್ರದೇಶಗಳಲ್ಲಿ ಈ ಸಮಸ್ಯೆಗಳು ಗಾಢವಾಗಿ ಬೇರೂರಿವೆ. ಆರ್ಥಿಕ ಅಸಮಾನತೆಯಿಂದ ಗ್ರಾಮೀಣ ಪ್ರದೇಶದ ಜನರು ನಗರಗಳಿಗೆ ವಲಸೆ ಹೋಗುವುದು ಸಾಮಾನ್ಯವಾಗಿ ಬಿಟ್ಟಿದೆ. ನಗರ ಪ್ರದೇಶಗಳಲ್ಲಿ ಮೂಲ ಸೌಕರ್ಯಗಳ ಬಳಕೆ ಹೆಚ್ಚಾಗುತ್ತಿದ್ದು, ಅವುಗಳ ಮೇಲಿನ ಒತ್ತಡ ಹೆಚ್ಚಿದೆ. ಗ್ರಾಮೀಣ ಪ್ರದೇಶಗಳಲ್ಲಿ ವಿಪುಲವಾಗಿ ದೊರಕುವ ಸಂಪನ್ಮೂಲಗಳನ್ನು ಸಮರ್ಥವಾಗಿ ಬಳಸಿಕೊಂಡು ಆ ಮೂಲಕ ಗ್ರಾಮಿಣ ಜನರಿಗೆ ಆರ್ಥಿಕ, ಆರ್ಥಿಕೇತರವಾಗಿ ಸಬಲೀಕರಣಗೊಳ್ಳಲು ಅನುವು ಮಾಡಿಕೊಡಬೇಕಾಗುತ್ತದೆ. ಈ ನಿಟ್ಟಿನಲ್ಲಿ ಉದ್ಯೋಗ ಖಾತರಿ ಯೋಜನೆಯು ಹೆಚ್ಚು ಪರಿಣಾಮಕಾರಿಯಾಗಬಲ್ಲದು.

ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯ ಸಮರ್ಥ ಅನುಷ್ಠಾನದಿಂದ ಹಳ್ಳಿಯ ಜನರ ಆರ್ಥಿಕ ಸ್ಥಿತಿಗತಿಯು ಉತ್ತಮಗೊಳ್ಳುವುದರಲ್ಲಿ ಸಂದೇಹವಿಲ್ಲ. ಸಂಪೂರ್ಣ ಉದ್ಯೋಗಗಳನ್ನು ಒದಗಿಸಿಕೊಡುವುದರಿಂದ ಗ್ರಾಮೀಣ ಜನರ ಜೊತೆ ಆರ್ಥಿಕ ಆರ್ಥಿಕೇತರ ಪರಿಣಾಮಗಳನ್ನು

ಮನಗಾಣಬಹುದು. ಉದ್ಯೋಗ ಖಾತರಿ ಯೋಜನೆಯ ಅನುಷ್ಠಾನದಿಂದ ಗ್ರಾಮೀಣ ಜನರಲ್ಲಿ ಆರ್ಥಿಕವಾಗಿ ಮತ್ತು ಆರ್ಥಿಕೇತರವಾಗಿ ಸಾಕಷ್ಟು ಪರಿಣಾಮ ಬೀರಿದೆ ಎಂದರೆ ತಪ್ಪಾಗಲಾರದು.

ಆರ್ಥಿಕ ಪರಿಣಾಮಗಳು ಎಂದರೆ ಮಾಪನ ಮಾಡಲು ಸಾಧ್ಯವಿರುವ ಚರ ಪರಿಮಾಣಗಳು. ಅವುಗಳೆಂದರೆ ಆದಾಯ, ಅನುಭೋಗ, ವಿಚಾರ, ಉಳಿತಾಯ ಮತ್ತು ಹೂಡಿಕೆ.

ಆರ್ಥಿಕೇತರ ಪರಿಣಾಮಗಳು ಎಂದರೆ, ಮಾಪನ ಮಾಡಲು ಸಾಧ್ಯವಿಲ್ಲದ ಚರ ಪರಿಣಾಮಗಳು, ಅವುಗಳೆಂದರೆ ಶಿಕ್ಷಣ, ಆರೋಗ್ಯ, ಸ್ವಾವಲಂಬನೆ, ಕೀರ್ತಿ ಇತ್ಯಾದಿಗಳು.

ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯ ಮಹತ್ವದ ಉದ್ದೇಶಗಳಲ್ಲಿ ಗ್ರಾಮೀಣ ಜನರನ್ನು ಕೇವಲ ಆರ್ಥಿಕವಾಗಿಯಲ್ಲದೆ ಆರ್ಥಿಕೇತರವಾಗಿಯೂ ಅಭಿವೃದ್ಧಿಗೊಳಿಸುವುದೇ ಆಗಿದೆ.

ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯ ಮಹತ್ವದ ಉದ್ದೇಶಗಳಲ್ಲಿ ಒಂದಾದ ಗ್ರಾಮೀಣ ಜನರ ಸ್ಥಳೀಯ ಅಗತ್ಯತೆಗಳನ್ನು ಪೂರೈಸಲು ಗ್ರಾಮೀಣ ಉಳಿತಾಯಕ್ಕೆ ಪ್ರೇರಣೆ ನೀಡುವುದು ಗ್ರಾಮೀಣ ಭಾಗಗಳಲ್ಲಿ, ಅಲ್ಲಿನ ಯೋಜನೆಗಳನ್ನು ಕಾರ್ಯಗತ ಮಾಡುವುದರಿಂದ ಗ್ರಾಮೀಣ ಉಳಿತಾಯದ ಸೃಷ್ಟಿಗೆ ಕಾರಣವಾಗುತ್ತದೆ. ಇದರಿಂದ ಗ್ರಾಮೀಣ ಭಾಗದ ಜನರಲ್ಲಿ ಬ್ಯಾಂಕಿಂಗ್ ಹವ್ಯಾಸಗಳನ್ನು ಸಹ ಬೆಳಸಬಹುದು.

ಗ್ರಾಮೀಣ ಪ್ರದೇಶಗಳಲ್ಲಿ ಮರೆಮಾಚಿದ ಉದ್ಯೋಗವಿರುವುದರಿಂದ ಉದ್ಯೋಗದ ಖಾತರಿ ನೀಡುವುದರಿಂದ ಕೃಷಿಯ ಜೊತೆಗೆ ಉದ್ಯೋಗ ಖಾತರಿ ಕೆಲಸಗಳನ್ನು ಮಾಡಬಹುದು. ಇದರಿಂದ ಕೃಷಿ ಉತ್ಪಾದನೆಗೇನೂ ತೊಂದರೆಯಾಗುವುದಿಲ್ಲ. ಮರೆಮಾಚಿದ ನಿರುದ್ಯೋಗಿಗಳನ್ನು ರಸ್ತೆ ನಿರ್ಮಾಣ ಗೃಹ ನಿರ್ಮಾಣ, ಕೆರೆಕಟ್ಟೆ ನಿರ್ಮಾಣ ಮುಂತಾದ ಕ್ಷೇತ್ರಗಳಲ್ಲಿ ಬಳಸಿಕೊಳ್ಳಬಹುದು. ಪೂರ್ಣ ಪ್ರಮಾಣದ ಉದ್ಯೋಗ ಸಿಗುವುದರಿಂದ ಆದಾಯ ಅಸಮಾನತೆಯನ್ನು ಕಡಿಮೆ ಮಾಡಬಹುದಾಗಿದೆ.

ಅರ್ಥಶಾಸ್ತ್ರಜ್ಞರು ಆರ್ಥಿಕ ಪರಿಣಾಮಗಳನ್ನು ಆರ್ಥಿಕ ಅಭಿವೃದ್ಧಿಯನ್ನು ನಿರ್ಧರಿಸುವ ಪ್ರಮುಖ ಸಂಗತಿಗಳೆಂದು ಪರಿಗಣಿಸಿದ್ದಾರೆ. ಆರ್ಥಿಕ ಅಭಿವೃದ್ಧಿಯೆಂದರೆ ಅರ್ಥ ವ್ಯವಸ್ಥೆಯ ಎಲ್ಲಾ ಕ್ಷೇತ್ರಗಳಲ್ಲಿ ಉತ್ಪಾದಕತೆಯನ್ನು ನಿರಂತರವಾಗಿ ಹೆಚ್ಚಿಸುವುದಾಗಿದೆ. ಗ್ರಾಮೀಣ ಪ್ರದೇಶಗಳಲ್ಲಿ ಉತ್ಪಾದಕತೆಯನ್ನು ಹೆಚ್ಚಿಸುವ ಮೂಲಕ ಗ್ರಾಮೀಣ ಅಭಿವೃದ್ಧಿ ಸಾಧ್ಯ. ಗ್ರಾಮೀಣ ಅಭಿವೃದ್ಧಿಗೆ ಕೇವಲ ಆರ್ಥಿಕ ಪರಿಣಾಮಗಳಲ್ಲದೆ ಆರ್ಥಿಕೇತರ ಪರಿಣಾಮಗಳೂ ಕಾರಣವಾಗುತ್ತವೆ.

ರಾಷ್ಟ್ರೀಯ ಉದ್ಯೋಗ ಖಾತರಿ ಯೋಜನೆಯಡಿ ಪ್ರತಿ ಗ್ರಾಮ ಪಂಚಾಯಿತಿಗೆ ಸುಮಾರು ೮೦ ರಿಂದ ೧೫೦ ಲಕ್ಷ ಹಣ ಕೇಂದ್ರದಿಂದ ವಾರ್ಷಿಕ ಅನುದಾನವಾಗಿ ಬರುತ್ತದೆ. ಇದರಿಂದ ಗ್ರಾಮೀಣ ಯುವಕರಿಗೆ ಉದ್ಯೋಗ ದೊರೆಯುತ್ತದೆ. ಅವರಿದ್ದ ಗ್ರಾಮದಲ್ಲಿಯೆ ಅವರು ಉದ್ಯೋಗ ಮಾಡಬಹುದು. ಅವರು ಮಾಡುವುದು ಅವರ ಹಳ್ಳಿಯ ಅಭಿವೃದ್ಧಿಯ ಕೆಲಸ. ಇದರಿಂದ ಗ್ರಾಮದ ಅಭಿವೃದ್ಧಿಯಾಗುತ್ತದೆ. ಅವರಿಗೊಂದಿಷ್ಟು ಹಣವೂ ಸಿಗುತ್ತದೆ. ಬ್ಯಾಂಕಿನಲ್ಲಾಗಲಿ, ಅಂಚೆ ಕಛೇರಿಯಲ್ಲಾಗಲಿ ಅವರ ಹೆಸರಿನಲ್ಲಿ ಖಾತೆಯನ್ನು ತೆರೆದು ಅದಕ್ಕೆ ಹಣವನ್ನು ತುಂಬಲಾಗುತ್ತದೆ. ಇದರಿಂದ ಅವರಲ್ಲಿ ಕಡ್ಡಾಯವಾಗಿ ಉಳಿತಾಯದ ಪ್ರವೃತ್ತಿ ಬೆಳೆಯುತ್ತದೆ. ಕೆಲಸ ಮಾಡುವಲ್ಲಿ ಇಂಗು ಗುಂಡಿ ತೋಡುವುದು, ರಸ್ತೆ ಮಾಡುವುದು, ಇಂತಹ ಎಲ್ಲಾ ಕಾರ್ಯಗಳು ಸೇರಿರುತ್ತವೆ. ಗ್ರಾಮೀಣ ಪ್ರದೇಶಗಳಲ್ಲಿ ಕೃಷಿಯೇ ಪ್ರಧಾನವಾಗಿದ್ದರೂ ಇತ್ತೀಚಿನ ದಿನಗಳಲ್ಲಿ ಕೃಷಿಯು ಯಂತ್ರಗಳಿಂದ ಸ್ಥಾನಪಲ್ಲಟಗೊಳ್ಳುತ್ತಾ ಹೋಗುವುದರಿಂದ ವರ್ಷದ ಎಲ್ಲಾ ದಿನಗಳಲ್ಲಿ ಪೂರ್ಣ ಪ್ರಮಾಣದ ಉದ್ಯೋಗ ಸಿಗುವುದಿಲ್ಲ. ಇಂತಹ ಸಂದರ್ಭಗಳಲ್ಲಿ ಉದ್ಯೋಗ ಖಾತರಿ ಯೋಜನೆಯು ಉದ್ಯೋಗ ನೀಡುವ ಮೂಲಕ ಪೂರ್ಣ ಪ್ರಮಾಣದ ಉದ್ಯೋಗ ಸಿಗುವುದಲ್ಲದೆ ತಮ್ಮ ಆದಾಯದ ಮಟ್ಟವನ್ನು ಹೆಚ್ಚಿಸಿಕೊಳ್ಳಬಹುದು.

ರಾಷ್ಟ್ರೀಯ ಉದ್ಯೋಗ ಖಾತರಿ ಯೋಜನೆಯಿಂದ ಗ್ರಾಮೀಣ ಜನತೆಯ ಆದಾಯವನ್ನು ಹೆಚ್ಚಿಸುವ ಮೂಲಕ ಗ್ರಾಮೀಣ ಜನತೆಯ ಕ್ಷೇಮಾಭಿವೃದ್ಧಿಯನ್ನು ಹೆಚ್ಚಿಸುತ್ತದೆ. ಇದರಿಂದ ಗ್ರಾಮೀಣ ಜನತೆ ಉತ್ತಮ ಆಹಾರವನ್ನು ಉಪಯೋಗಿಸಲು ಮತ್ತು ವಸತಿ, ವಿದ್ಯುಚ್ಛಕ್ತಿ, ಶಿಕ್ಷಣ, ಆರೋಗ್ಯ, ಸಾರಿಗೆ ಇತ್ಯಾದಿ ಪಡೆಯಲು ಈ ಯೋಜನೆಯು ಸಾಕಷ್ಟು ನೆರವಾಗಬಹುದು. ಭಾರತ ಕೃಷಿ ಆಧಾರಿತ ದೇಶ. ನಮ್ಮ ಹಳ್ಳಿಯ ಜನರಿಗೆ ಕೃಷಿ ಬಿಟ್ಟರೆ ಮತ್ತೇನೂ ಗೊತ್ತಿರಲಿಲ್ಲ. ಕೃಷಿ ಬದುಕು ನಿಸರ್ಗದತ್ತವಾಗಿ ಬಂದ ಕೊಡುಗೆ ಆದರೆ ಕೃಷಿಯಲ್ಲುಂಟಾದ ಅನೇಕ ಬದಲಾವಣೆಗಳಿಂದ ಜನರ ಜೀವನ ಮಟ್ಟ ಸುಧಾರಿಸುವುದು ಕಷ್ಟ. ಈ ಹಿನ್ನಲೆಯಿಂದ ಸರ್ಕಾರವು ತನ್ನ ಸಂವಿಧಾನಬದ್ಧ ಕರ್ತವ್ಯವನ್ನು ನಿರ್ವಹಿಸುವ ದಿಕ್ಕಿನಲ್ಲಿ ಕೆಲವು ಪ್ರಮುಖ ಕಾರ್ಯಕ್ರಮಗಳನ್ನು ಹಾಕಿಕೊಂಡಿದೆ. ಜನರು ಹಸಿವಿನಿಂದ ಸಾಯಬಾರದು ಎನ್ನುವ ಉದ್ದೇಶದಿಂದ ದುಡಿಯುವ ಕೈಗಳಿಗೆ ಕೆಲಸ ನೀಡಲು ಗ್ರಾಮೀಣ ಖಾತ್ರಿ ಯೋಜನೆಗಳನ್ನು ಕೇಂದ್ರ ಸರ್ಕಾರ ಜಾರಿಗೆ ತಂದಿದ್ದು ಈಗಾಗಲೆ ದೇಶದ ೪.೫ ಕೋಟಿ ಜನರನ್ನು ತಲುಪಿದೆ. ಈ ಯೋಜನೆಯನ್ನು ವಿಸ್ತರಿಸುವ ಸಲುವಾಗಿ ಈ ಬಾರಿಯ ಬಜೆಟ್‌ನಲ್ಲಿ ಅನುದಾನವನ್ನು ರೂ. ೪೦,೧೦೦ಕೋಟಿ ರೂ.ಗೆ ಹೆಚ್ಚಿಸಲಾಗಿದೆ. ಈ ಯೋಜನೆಯಿಂದ ಈ ಕೆಳಗಿನ ಆರ್ಥಿಕ ಆರ್ಥಿಕೇತರ ಪರಣಾಮಗಳನ್ನು ಕಾಣಬಹುದು.

**೧. ಶಿಕ್ಷಣ**

ಉದ್ಯೋಗ ಖಾತರಿ ಯೋಜನೆಯ ಸೌಲಭ್ಯವನ್ನು ಪಡೆದಂತಹ ಕುಟುಂಗಳು ತಮ್ಮ ದುಡಿಮೆಯಲ್ಲಿ ಸ್ವಲ್ಪ ಪಾಲನ್ನು ತಮ್ಮ ಮಕ್ಕಳ ವಿದ್ಯಾಭ್ಯಾಸಕ್ಕಾಗಿ ಮೀಸಲಿಡುತ್ತಾರೆ. ಇದರಿಂದ ತಮ್ಮ ಮಕ್ಕಳ ವಿದ್ಯಾಭ್ಯಾಸಕ್ಕೆ ಅಗತ್ಯವಾಗಿ ಬೇಕಾಗಿರುವಂತಹ ಪುಸ್ತಕ, ಪೆನ್ನು ಸಮವಸ್ತ್ರ ಮುಂತಾದವುಗಳನ್ನು ಕೊಳ್ಳುವುದಕ್ಕೆ ಅನುಕೂಲವಾಗಿ ಅವರ ಮಕ್ಕಳ ಶಿಕ್ಷಣದ ಗುಣಮಟ್ಟ ಹೆಚ್ಚುತ್ತದೆ.

**೨. ಉತ್ತಮ ಆರೋಗ್ಯ**

ಈ ಯೋಜನೆಯಿಂದ ಜನತೆಯ ಉತ್ತಮವಾದಂತಹ ಆರೋಗ್ಯವನ್ನು ಪಡೆಯಲು ಸಾಧ್ಯವಾಗುತ್ತದೆ. ದುಡಿದದ್ದರಿಂದ ಬಂದಂತಹ ಹಣದಿಂದ ತಮ್ಮ ಅಗತ್ಯತೆಗಳನ್ನು ಈಡೇರಿಸಿಕೊಂಡು ಉತ್ತಮ ಗುಣಮಟ್ಟದ ಆಹಾರವನ್ನು ಸೇವಿಸುವುದರಿಂದ ಅವರ ಆರೋಗ್ಯದ ಗುಣಮಟ್ಟವು ಹೆಚ್ಚಿ ಉತ್ತಮ ಆರೋಗ್ಯವಂತರಾಗುತ್ತಾರೆ.

**೩. ಆದಾಯ ಮತ್ತು ಉತ್ಪನ್ನದ ಹೆಚ್ಚಳ**

ಈ ಯೋಜನೆಯಿಂದ ಜಿಲ್ಲೆಯ ರಾಜ್ಯದ ರಾಷ್ಟ್ರದ ಆದಾಯ ಮತ್ತು ಉತ್ಪನ್ನ ಹೆಚ್ಚುತ್ತದೆ. ಇದರಿಂದಾಗಿ ಆ ರಾಷ್ಟ್ರವು ಪ್ರಗತಿ ಪಥದಲ್ಲಿ ಮುನ್ನಡೆಯುವುದು ಸಾಧ್ಯವಾಗುತ್ತದೆ. ಅಭಿವೃದ್ಧಿಯ ಕಾರಣದಿಂದಾಗಿ ಆದಾಯ ಮತ್ತು ಉತ್ಪನ್ನಗಳು ಹೆಚ್ಚುವುದರಿಂದ ನೈಜ ತಲಾದಾಯ ಹೆಚ್ಚುತ್ತದೆ.

**೪. ಜೀವನ ಮಟ್ಟ ಸುಧಾರಣೆ**

ಈ ಯೋಜನೆಯ ಸೌಲಭ್ಯವನ್ನು ಪಡೆದಂತಹು ಕುಟುಂಬಗಳ ಜೀವನ ಮಟ್ಟವು ಹೆಚ್ಚುತ್ತದೆ ಅವರ ಉಳಿತಾಯವು ಹೆಚ್ಚಿದಂತೆಲ್ಲಾ ತಮ್ಮ ಅವಶ್ಯಕತೆಗಳು ಈಡೇರಿದಂತೆಲ್ಲಾ ಜನತೆಯ ನಿರುದ್ಯೋಗವು ನಿವಾರಣೆಯಾಗಿ ಜೀವನ ಮಟ್ಟ ಸುಧಾರಣೆಯಾಗುತ್ತದೆ.

**೫. ಸಮಾನತೆ**

ಈ ಯೋಜನೆಯ ಸೌಲಭ್ಯದಿಮದ ಸಮಾಜದಲ್ಲಿ ಸಮಾನತೆಯನ್ನು ಕಾಣಬಹುದಾಗಿದೆ. ಬಡವ ಶ್ರೀಮಂತರೆಂಬ ಬೇದಭಾವವಿಲ್ಲದೆ ಯಾರೂ ಬೇಕಾದರೂ ಕೆಲಸವನ್ನು ಮಾಡಬಹುದು. ಹೆಚ್ಚಿನದಾಗಿ ಬಡಜನತೆಯು ಹೆಚ್ಚು ಹೆಚ್ಚು ಉದ್ಯೋಗಗಳನ್ನು ಪಡೆದು ಉಳಿತಾಯದ ಮನೋಭಾವವು ಹೆಚ್ಚಿ ಸಮಾಜದಲ್ಲಿ ಶ್ರೀಮಂತ ಬಡವ ಎಂಬ ಭೇದ ಭಾವವಿಲ್ಲದೆ ಸಮಾನತೆಯನ್ನು ಸ್ಥಾಪಿಸಲು ಈ ಯೋಜನೆಯು ಉಪಕಾರಿಯಾದುದು.

**೬. ನಿರುದ್ಯೋಗ ಮತ್ತು ಬಡತನ ನಿವಾರಣೆ:**

ಈ ಯೋಜನೆಯು ನಿರುದ್ಯೋಗ ಮತ್ತು ಬಡತನಗಳ ನಿವಾರಣೆಗೆ ನೆರವಾಗುತ್ತದೆ. ಆದಾಯ ಹೆಚ್ಚುತ್ತದೆ. ಉದ್ಯೋಗಾವಕಾಶಗಳ ವಿಸ್ತರಣೆಯಾಗುತ್ತದೆ. ಇದರಿಂದ ಜನತೆಯು ತಮ್ಮ ಹಸಿವು, ದಾರಿದ್ರ್ಯ ಮತ್ತು ನೋವುಗಳನ್ನು ನಿವಾರಿಸಿಕೊಳ್ಳಲು ಸಾಕಷ್ಟು ಆದಾಯ ಪಡೆಯುವುದು ಸಾಧ್ಯವಾಗುತ್ತದೆ. ಇಷ್ಟೇ ಅಲ್ಲದೆ ಅವರು ಅನೇಕ ಅತ್ಯಾಧುನಿಕ ಸರಕು ಮತ್ತು ಸೇವೆಗಳನ್ನು ಅನುಭೋಗಿಸುವುದೂ ಸಾಧ್ಯವಾಗುತ್ತದೆ.

**೭. ಆರ್ಥಿಕವಾಗಿ ಸ್ವಾಲಂಭಿಗಳಾಗಬಹುದು**

ಯಾರೇ ಆಗಿರಲಿ ಆರ್ಥಿಕ ವಿಚಾರಗಳಲ್ಲಿ ಸ್ವಾವಲಂಬನೆ ಸಾಧಿಸುವುದು ಕ್ಷೇಮಕರ. ವಿವಿಧ ಕೆಲಸ ಕಾರ್ಯಗಳನ್ನು ಮಾಡುವುದರ ಮುಖಾಂತರ ಅಂದರೆ ಕೃಷಿ ಒಂದನ್ನೇ ಅವಲಂಭಿಸದೆ ಸರ್ಕಾರದ ವಿವಿಧ ಯೋಜನೆಗಳನ್ನು ಉಪಯೋಗಿಸಿಕೊಳ್ಳುವುದರಿಂದ ಆರ್ಥಿಕವಾಗಿ ಸದೃಢರಾಗಿ ತಮ್ಮ ಅಗತ್ಯತೆಗಳನ್ನು ತಾವೇ ಪೂರೈಸಿಕೊಳ್ಳಲು ಸಾಧ್ಯವಾಗುತ್ತದೆ.

**೮. ಭೂ ಸುಧಾರಣೆ**

ಈ ಯೋಜನೆಯ ಸೌಲಭ್ಯವನ್ನು ಪಡೆದಂತಹ ರೈತರು ತಮ್ಮ ಜಮೀನುಗಳಲ್ಲಿ ಒಡ್ಡುಗಳನ್ನು ನಿರ್ಮಿಸುವುದು. ಬದುಗಳನ್ನು ನಿರ್ಮಿಸುವುದು, ಬಾಳೆ, ತೆಂಗು ಅಡಿಕೆ ಮುಂತಾದ ಬೆಳೆಗಳನ್ನು ಬೆಳೆಯಲು ತಮ್ಮ ಜಮೀನನ್ನು ಸಮತಟ್ಟೆಗಿಸುವುದರಿಂದ ಭೂಮಿಯು ಸುಧಾರಣೆಯಾಗುತ್ತದೆ.

**೯. ಪ್ರಾದೇಶಿಕ ಅಸಮತೋಲನ ನಿವಾರಣೆ**

ಸ್ವಾಭಾವಿಕ ಸಂಪತ್ತು ಒಂದು ನಿಸರ್ಗದ ಕೊಡುಗೆ ಹಾಗಾಗಿ ಈ ಸಂಪತ್ತು ಕೇವಲ ಕೆಲವೇ ಪ್ರದೇಶಗಳಲ್ಲಿರುತ್ತದೆ. ಆದ್ದರಿಂದಲೇ ನಾವು ಹಿಂದುಳಿದ ಪ್ರದೇಶ, ಮುಂದುವರೆಯುತ್ತಿರುವ ಪ್ರದೇಶ ಅಂತ ಗುರ್ತಿಸುತ್ತೇವೆ. ಈ ಪ್ರಾದೇಶಿಕ ಅಸಮಾನತೆಯನ್ನು ಹೋಗಲಾಡಿಸಬೇಕೆಂದರೆ ಇಂತಹ ಯೋಜನೆಗಳನ್ನು ಸಮರ್ಪಕವಾಗಿ ಮತ್ತು ದಕ್ಷವಾಗಿ ಉಪಯೋಗಿಸಿಕೊಂಡಾಗ ಮಾತ್ರ ಸಾಧ್ಯವಾಗುತ್ತದೆ. ಆದ್ದರಿಂದ ಯೋಜನೆಯ ಪ್ರಾದೇಶಿಕ ಅಸಮತೋಲನ ನಿವಾರಿಸುವಲ್ಲಿ ಸಹಾಯಕಾರಿಯಾಗಿದೆ.

**೧೦. ರೈತರ ಆತ್ಮಹತ್ಯೆ ತಡೆಯುತ್ತದೆ**

ಈ ಯೋಜನೆಯ ಸೌಲಭ್ಯ ಪಡೆದ ರೈತರಲ್ಲಿ ಆತ್ಮ ಸ್ಥೈರ್ಯ ಹೆಚ್ಚಿ ದುಡಿಯಲು ಮುಂದಾಗುತ್ತಾರೆ. ಕೃಷಿಯ ನಂತರ ರೈತರಿಗೆ ಕೆಲಸವಿರುವುದಿಲ್ಲ. ಇಂತಹ ಸಮಯದಲ್ಲಿ ಈ ಯೋಜನೆಯನ್ನು ಉಪಯೋಗಿಸಿಕೊಂಡು ೧೦೦ ದಿನಗಳವರೆಗೆ ಉದ್ಯೋಗವನ್ನು ಪಡೆಯುವುದರ ಮುಖಾಂತರ ಆತ್ಮಹತ್ಯೆಯನ್ನು ತಡೆಯುವಲ್ಲಿ ಯಶಸ್ವಿಯಾಗಿದೆ ಎಂದು ಹೇಳಬಹುದು.

**೧೧. ಸುಖೀ ರಾಜ್ಯದ ಸ್ಥಾಪನೆ**

ಮಹಾತ್ಮಗಾಂಧೀಜಿಯವರ "ರಾಮರಾಜ್ಯ" ದ ಕನಸನ್ನು ಸಾಕಾರಗೊಳಿಸುವ ಸಲುವಾಗಿ ಜನತೆಗೆ ಉದ್ಯೋಗವನ್ನು ನೀಡುವುದರ ಮುಖಾಂತರ ಅವರ ಆಸೆ ಆಕಾಂಕ್ಷೆಗಳನ್ನು ಈಡೇರಿಸಿ ಸುಖೀರಾಜ್ಯ ಸ್ಥಾಪನೆ ಮಾಡಬಹುದಾಗಿದೆ.

**೧೨. ಜಲ ಸಂಪನ್ಮೂಲದ ವೃದ್ಧಿ**

ಈ ಯೋಜನೆಯಿಂದ ಇಂಗು ಗುಂಡಿಯನ್ನು ನಿರ್ಮಿಸುವುದರಿಂದ ಜಲ ಸಂಪತ್ತನ್ನು ಹೆಚ್ಚಿಸುವುದರ ಮುಖಾಂತರ ನೀರನ್ನು ಶೇಖರಿಸಿಡಬಹುದು.

**೧೩. ಭೂ ಸವೆತ ತಡೆಯಬಹುದು**

ಭೂಮಿಗೆ ಅಡ್ಡಲಾಗಿ ಒಡ್ಡುಗಳನ್ನು ನಿರ್ಮಾಣ ಮಡುವುದರ ಮುಖಾಂತರ ಭೂಮಿಯು ಮಳೆ ನೀರಿಗೆ ಕೊಚ್ಚಿ ಹೋಗದಂತೆ ಇಳಿಜಾರಿಗೆ ಅಡ್ಡವಾಗಿ ಬದ ಅಥವಾ ಒಡ್ಡುಗಳ ನಿರ್ಮಾಣದಿಂದ ಭೂಸವೆತ ತಡೆಗಟ್ಟಿ ಭೂಮಿಯ ಫಲವತ್ತತೆಯನ್ನು ಹೆಚ್ಚಿಸಬಹುದು.

**೧೪. ಬಂಡವಾಳ ಸಂಚಯನ**

ಈ ಯೋಜನೆಯಿಂದ ಬಂಡವಾಳ ಸಂಚಯನಕ್ಕೆ ಪ್ರಚೋದನ ದೊರೆಯುತ್ತದೆ. ಅಭಿವೃದ್ಧಿ ಪ್ರಕ್ರಿಯೆಯಿಂದ ಜನರ ಉಳಿತಾಯ ಸಾಮರ್ಥ್ಯ ವೃದ್ಧಿಗೊಳ್ಳುತ್ತದೆ. ಇದರಿಂದಾಗಿ ಬಂಡವಾಳ ಸಂಚಯನ ಅಧಿಕಗೊಂಡು ಅಭಿವೃದ್ಧಿ ಪ್ರಕ್ರಿಯೆಗೆ ಇನ್ನೂ ಹೆಚ್ಚಿನ ರೀತಿಯಲ್ಲಿ ಚಾಲನೆ ದೊರೆಯುತ್ತದೆ.

**೧೫. ಆಹಾರ ಸಮನ್ವಯ ನಿವಾರಣೆ**

ಈ ಯೋಜನೆಯ ಫಲಾನುಭವಿಗಳು ತಮ್ಮ ಶ್ರಮಕ್ಕೆ ತಕ್ಕ ಪ್ರತಿಫಲವನ್ನು ಅರ್ಧ ಹಣ ಹಾಗೂ ಅರ್ಧ ಆಹಾರ ಪದಾರ್ಥಗಳನ್ನು ಪಡೆಯುವುದರಿಂದ ಅವರ ಆಹಾರ ಸಮಸ್ಯೆ ನಿವಾರಣೆಯಾಗುತ್ತದೆ.

**೧೬. ಸಂಪನ್ಮೂಲಗಳ ದಕ್ಷ ಬಳಕೆ**

ಸಂಪನ್ಮೂಲಗಳನ್ನು ದಕ್ಷವಾಗಿ ಬಳಸಿಕೊಳ್ಳುವುದು ಈ ಯೋಜನೆಯಿಂದ ಸಾಧ್ಯವಾಗುತ್ತದೆ. ಸಂಪನ್ಮೂಲಗಳು ಹೇರಳವಾಗಿ ಲಭ್ಯವಿರುವುದಿಲ್ಲ. ಅವುಗಳು ವಿರಳವಾಗಿರುವುದರಿಂದ ಅವನ್ನು ದಕ್ಷವಾಗಿ ಪೋಲಾಗದ ರೀತಿಯಲ್ಲಿ ಬಳಸುವುದು ಇಂದಿನ ಜರೂರು ಅಗತ್ಯವಾಗಿದೆ.

**೧೭. ಸ್ತ್ರೀ ವಿಮೋಚನೆ**

ಈ ಯೋಜನೆಯು ಮಹಿಳಾ ವಿಮೋಚನೆಗೆ ಅವಕಾಶ ಕಲ್ಪಿಸುತ್ತದೆ. ಅಭಿವೃದ್ಧಿ ಪ್ರಕ್ರಿಯೆ ಕಾರಣದಿಂದಾಗಿ ಪ್ರಗತಿ ಹೊಂದುತ್ತಿರುವ ಸಮಾಜದಲ್ಲಿ ಮಹಿಳೆಯರು ಕೇವಲ ಕೌಟುಂಬಿಕ ಕೆಲಸಗಳಿಗಷ್ಟೆ ಸೀಮಿತಗೊಳ್ಳದೆ ಉದ್ಯೋಗವನ್ನು ಪಡೆಯುವುದರ ಮುಖಾಂತರ 'ಸಮಾನ ವೇತನ" ವನ್ನು ಪಡೆದು ವಿಮೋಚನೆಯನ್ನು ಪಡೆಯುತ್ತಾರೆ.

**೧೮. ಸಾರಿಗೆ ಸಂಪರ್ಕ ವೃದ್ಧಿ**

ಈ ಯೋಜನೆಯಿಂದ ಗ್ರಾಮಾಂತರ ಪ್ರದೇಶಗಳಿಗೆ ರಸ್ತೆಗಳನ್ನು ನಿರ್ಮಾಣ ಮಾಡುವುದರಿಂದ, ಹಳ್ಳಿಯಿಂದ ನಗರಗಳಿಗೆ ಸಂಪರ್ಕ ಕಲ್ಪಿಸುವ ರಸ್ತೆಗಳನ್ನು ನಿರ್ಮಾಣ ಮಾಡುವುದರಿಂದ ಸಾರಿಗೆ ಸಂಪರ್ಕ ವೃದ್ಧಿಯಾಗುತ್ತದೆ.

**೧೯. ಕೃಷಿ ಉತ್ಪಾದನೆಯಲ್ಲಿ ಹೆಚ್ಚಳ**

ದೇಶಕ್ಕೆ ಸ್ವಾತಂತ್ರ್ಯ ಬಂದ ಸಂದರ್ಭದಲ್ಲಿ ಭಾರತ ಆಹಾರದ ಕೊರತೆಯ ಸಮಸ್ಯೆಯನ್ನು ಎದುರಿಸುತ್ತಿದ್ದು ಆದರೆ ಸ್ವಾತಂತ್ರ್ಯಾನಂತರದ ಕ್ರಾಂತಿಕಾರಿ ಬದಲಾವಣೆಗಳ ಕಾರಣದಿಂದಾಗಿ ಆಹಾರ ಸಾಮಗ್ರಿಗಳ ಉತ್ಪಾದನೆ ಗಣನೀಯವಾಗಿ ಹೆಚ್ಚಿದೆ ಅದರಲ್ಲೂ ಉದ್ಯೋಗ ಖಾತರಿ ಯೋಜನೆಯಿಂದ ಗ್ರಾಮೀಣ ಜನತೆಯು ತಮ್ಮ ತಮ್ಮ ಜಮೀನುಗಳನ್ನು ಅಭಿವೃದ್ಧಿ ಪಡಿಸಿಕೊಂಡು ಕೃಷಿ ಉತ್ಪಾದನೆಯ ಹೆಚ್ಚಳಕ್ಕೆ ಕಾರಣರಾಗಿದ್ದಾರೆ.

**೨೦. ಕೈಗಾರಿಕಾಭಿವೃದ್ಧಿ**

ರೈತರು ಕೃಷಿಯಲ್ಲಿ ಕೈಗಾರಿಕೆಗಳಿಗೆ ಅಗತ್ಯವಾಗಿರುವಂತಹ ಕಚ್ಚಾ ಪದಾರ್ಥಗಳನ್ನು ಪೂರೈಸುವುದರಿಂದ ಕೈಗಾರಿಕೆಗಳು ಅಭಿವೃದ್ಧಿಯಾಗುತ್ತವೆ.

**೨೧. ಸಮ ಸಮಾಜದ ಸ್ಥಾಪನೆ**

ಪ್ರಜಾ ಪ್ರಭುತ್ವದ ಮುಖ್ಯ ಗುರಿ ಎಂದರೆ 'ಸಮ' ಸಮಾಜದ ಸ್ಥಾಪನೆ ಆರ್ಥಿಕ ಪ್ರಗತಿಯಾಗದ ಹೊರತು ಸಾಮಾಜಿಕ ಮತ್ತು ಶೈಕ್ಷಣಿಕ ಅಭಿವೃದ್ಧಿ ಸಾಧ್ಯವಾಗುವುದಿಲ್ಲ.

ಆರ್ಥಿಕವಾಗಿ ಸ್ವಾವಲಂಬಿಗಳಾದ ಕುಟುಂಬಗಳು ಶೈಕ್ಷಣಿಕ ಸಾಧನೆಯನ್ನು ಮಾಡುತ್ತವೆ. ಶೈಕ್ಷಣಿಕವಾಗಿ ಮುಂದುವರೆದ ಕುಟುಂಬಗಳು ಸಾಮಾಜಿಕವಾಗಿ ಮುಂದುವರೆಯುತ್ತವೆ.

ಆದ್ದರಿಂದ ದೇಶದ ಸರ್ವತೋಮುಖ ಅಭಿವೃದ್ಧಿಗೆ ಆರ್ಥಿಕ ಅಂಶಗಳು ಮುಖ್ಯ ಕಾರಣಗಳಾಗಿವೆ. ಅಭಿವೃದ್ಧಿ ಹೊಂದಿದ ದೇಶಗಳಲ್ಲಿ ಆರ್ಥಿಕ ಅಸಮಾನತೆಗಳು ಕಡಿಮೆ ಪ್ರಮಾಣದಲ್ಲಿದೆ.

ಭಾರತದಂತಹ ಅಭಿವೃದ್ಧಿಶೀಲ ರಾಷ್ಟ್ರದಲ್ಲಿ ಆರ್ಥಿಕ ಸಮತೋಲನೆ ಅಜಗಜಾಂತರವಾಗಿದೆ. ಆರ್ಥಿಕವಾಗಿ ಸದೃಢವಾಗದ ಕುಟುಂಬಗಳು ಮೂಲಭೂತ ಸೌಲಭ್ಯಗಳಿಂದ ವಂಚಿತವಾಗುತ್ತಿವೆ. ದೇಶದ ಎಲ್ಲಾ ಪ್ರಜೆಗಳಿಗೂ ಮೂಲಭೂತ ಸೌಲಭ್ಯಗಳು ದೊರೆಯದ ಹೊರತು ಅಂತಹ ದೇಶ ಅಭಿವೃದ್ಧಿ ಹೊಂದಿದ ದೇಶವಾಗುವುದಿಲ್ಲ.

ಆದ್ದರಿಂದ ಆರ್ಥಿಕ ಪ್ರಗತಿಯನ್ನು ಸಾಧಿಸಲು ಕೇಂದ್ರ ಸರ್ಕಾರ ಮತ್ತು ರಾಜ್ಯ ಸರ್ಕಾರಗಳು ಅನೇಕ ಯೋಜನೆಗಳನ್ನು ರೂಪಿಸಿ ಪಂಚವಾರ್ಷಿಕ ಪ್ರಣಾಳಿಕೆಗಳಲ್ಲಿ ಅಂತಹ ಯೋಜನೆಗಳ ಅನುಷ್ಠಾನಕ್ಕೆ ಹಣಕಾಸನ್ನು ಮೀಸಲಿರಿಸುತ್ತೇವೆ.

ಈ ನಿಟ್ಟಿನಲ್ಲಿ ಭಾರತ ಸರ್ಕಾರವೂ ಕೂಡ ಆರ್ಥಿಕ ಸಮಾನತೆಯನ್ನು ಸಾಧಿಸಿ ಆ ಮೂಲಕ "ಸಮ ಸಮಾಜವನ್ನು" ಸ್ಥಾಪಿಸಲು "ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತ್ರಿ" ಯಂತಹ ಯೋಜನೆಯನ್ನು ರೂಪಿಸಿ ಅನುಷ್ಠಾನಗೊಳಿಸಿ ಆರ್ಥಿಕ ಸ್ವಾವಲಂಬನೆ ಸಾಧಿಸಲು ಶ್ರಮಿಸುತ್ತಿದೆ.

## ೫.೨. ಆರ್ಥಿಕ ಮತ್ತು ಆರ್ಥಿಕೇತರ ಪರಿಣಾಮದ ಒಂದು ಮಾದರಿ



# ಅಧ್ಯಾಯ – ೬

# ಅಂಕಿ ಅಂಶಗಳ ವಿಶ್ಲೇಷಣೆ

## ೬.೧. ಮುಖ್ಯ ಚಲಕಗಳು

ಈ ಭಾಗವು ೬ ನೇ ಅಧ್ಯಾಯದಲ್ಲಿ ಮಹಾತ್ಮಗಾಂಧಿ ರಾಷ್ಟ್ರೀಯ ಉದ್ಯೋಗ ಖಾತರಿ ಯೋಜನೆಗೆ ಸಂಬಂಧಪಟ್ಟಂತೆ ಸಂಗ್ರಹಿಸಿದ ಮಾಹಿತಿಯ ಅಂಕಿ ಅಂಶಗಳ ವಿಶ್ಲೇಷಣೆಯನ್ನು ಒಳಗೊಂಡಿದೆ. ಮಹಾತ್ಮ ಗಾಂಧಿ ರಾಷ್ಟ್ರೀಯ ಉದ್ಯೋಗ ಖಾತರಿ ಯೋಜನೆಯ ಬಗ್ಗೆ ಸಂಗ್ರಹಿಸಿದ ಮಾಹಿತಿಯು ಹಲವಾರು ವಿಷಯಗಳ ಬಗ್ಗೆ ಬೆಳಕನ್ನು ಚೆಲ್ಲಿರುವುದನ್ನು ಗಮನಿಸಬಹುದಾಗಿದೆ. ಆರ್ಥಿಕಾಭಿವೃದ್ಧಿಯನ್ನು ಧ್ಯೇಯವಾಗಿಟ್ಟುಕೊಂಡು ಉದ್ಯೋಗ ಸೃಷ್ಟಿಗೆ ಶ್ರಮಿಸುವ ಮೂಲಕ ಮಹಾತ್ಮ ಗಾಂಧಿ ರಾಷ್ಟ್ರೀಯ ಉದ್ಯೋಗ ಖಾತರಿ ಯೋಜನೆಯ ಗುಣವನ್ನು ನಿರುದ್ಯೋಗ ಯುವ ಜನರಲ್ಲಿ ಅದರಲ್ಲೂ ವಿಶೇಷವಾಗಿ ಗ್ರಾಮೀಣ ಸಮಾಜದ ದುರ್ಬಲ ವರ್ಗದವರ ಅಭಿವೃದ್ಧಿಗಾಗಿ ಪಣ ತೊಟ್ಟಿರುವ ರಾಷ್ಟ್ರೀಯ ಉದ್ಯೋಗ ಖಾತರಿ ಯೋಜನೆಯ ಸಾಧನೆಯನ್ನು ಈ ವಿಶ್ಲೇಷಣೆಯು ವಿವರಿಸುತ್ತದೆ. ಈ ವಿಶ್ಲೇಷಣೆಯು ಮಹಾತ್ಮ ಗಾಂಧಿ ರಾಷ್ಟ್ರೀಯ ಉದ್ಯೋಗ ಖಾತರಿ ಯೋಜನೆಯಿಂದ ಲಭ್ಯವಾದ ಪ್ರಶ್ನಾವಳಿ ಮೂಲಕ ಪ್ರಾಥಮಿಕ ಮೂಲದಿಂದ ಪಡೆಯಲಾದ ಮಾಹಿತಿಯನ್ನು ಆಧರಿಸಿ ಈ ಕೆಳಗಿನ ಚಲಕಗಳನ್ನು ವಿಶ್ಲೇಷಣೆಗೆ ಬಳಸಿಕೊಳ್ಳಲಾಗಿದೆ.

**ಕೋಷ್ಟಕ ೧**

| ಲಿಂಗ | ಫಲಾನುಭವಿಗಳು | ಶೇಕಡಾ |
|---|---|---|
| ಪುರುಷ | ೧೧ | ೬೪.೭೧% |
| ಮಹಿಳೆಯರು | ೦೬ | ೩೫.೨೯% |
| ಒಟ್ಟು | ೧೭ | ೧೦೦% |

**ವಿಶ್ಲೇಷಣೆ:** ಈ ಮೇಲಿನ ಕೋಷ್ಟಕದಲ್ಲಿ ಲಿಂಗಾಧಾರಿತ ಶೇಕಡಾವಾರು ವಿತರಣೆಯನ್ನು ನೋಡಬಹುದು. ೬೪.೭೧% ರಷ್ಟು ಪುರುಷರು ಮತ್ತು ೩೫.೨೯% ರಷ್ಟು ಮಹಿಳೆಯರನ್ನು ಈ ಅಧ್ಯಯನಕ್ಕೆ ಫಲಾನುಭವಿಗಳನ್ನು ಆಯ್ಕೆ ಮಾಡಿಕೊಳ್ಳಲಾಗಿದೆ.

**ಕೋಷ್ಟಕ ೨**

**ಕೋಷ್ಟಕ ಎರಡು ಭಾಷೆಗೆ ಸಂಬಂಧಿಸಿದಂತೆ ತಿಳಿಯಪಡಿಸುತ್ತದೆ.**

| **ಭಾಷೆ** | **ಪುರುಷರು** | **ಮಹಿಳೆಯರು** | **ಒಟ್ಟು** |
|---|---|---|---|
| ಕನ್ನಡ | ೧೦ (೫೮.೮೨) | ೭ (೪೧.೧೮%) | ೧೭ ೧೦೦%) |
| ತುಳು | ೯ (೫೨.೯೪) | ೬ (೩೫.೨೯) | ೧೫ (೮೮.೨೩) |
| ಕೊಂಕಣಿ | ೦೦ | ೦೦ | ೦೦ |

**ವಿಶ್ಲೇಷಣೆ:** ಈ ಮೇಲಿನ ಕೋಷ್ಟಕದ ಪ್ರಕಾರ ಪ್ರಮುಖಾವಾಗಿ ನಮಗೆ ತಿಳಿಯುವುದೇನೆಂದರೆ ೧೦೦% ಫಲಾನುಭವಿಗಳು ಕನ್ನಡ ಭಾಷೆಯನ್ನು ಶೇಕಡಾ ೫೮.೨೩% ರಷ್ಟು ಜನರು ತುಳು ಭಾಷೆಯನ್ನು ಮಾತನಾಡುತ್ತಾರೆ.

**ಕೋಷ್ಟಕ ೩**

**ಕೋಷ್ಟಕ ಮೂರು ಫಲಾನುಭವಿಗಳ ವಯೋಮಿತಿಯನ್ನು ತಿಳಿಯಪಡಿಸುತ್ತದೆ.**

| **ಫಲಾನುಭವಿಗಳು** | **೨೦–೨೯** | **೨೯.೩೯** | **೩೯.೪೦** | **ಒಟ್ಟು** |
|---|---|---|---|---|
| ಪುರುಷರು | ೪(೨೩.೫೩) | ೩(೧೭.೬೫) | ೩(೧೭.೬೫) | ೧೦(೫೮.೮೩) |
| ಮಹಿಳೆಯರು | ೦೦ | ೨(೧೧.೭೬) | ೫(೨೯.೪೧) | ೭(೪೧.೧೭) |
| **ಒಟ್ಟು** | **೪(೨೩.೫೩)** | **೫(೨೯.೪೧)** | **೮(೪೭.೦೬)** | **೧೭(೧೦೦)** |

**ವಿಶ್ಲೇಷಣೆ:** ಕೋಷ್ಟಕ ಮೂರರಲ್ಲಿ ನಾವು ಮೂರು ಹಂತವಾಗಿ ವಯೋಮಿತಿಯನ್ನು ವಿಂಗಡಿಸಿದ್ದು ಶೇಕಡಾ ೪೭.೦೬% ರಷ್ಟು ಫಲಾನುಭವಿಗಳು ೪೦ ವರ್ಷಕ್ಕಿಂತ ಮೇಲ್ಪಟ್ಟವರೂ ಇದ್ದಾರೆ. ೨೯.೪೧% ರಷ್ಟು ಜನರು ೨೯ರಿಂದ ೩೯ರ ವಯಸ್ಸಿನ ಒಳಗೆ ಇರುವವರು ಬರುತ್ತಾರೆ. ೨೩.೫೩%ರಷ್ಟು ಜನರು ೨೦ ರಿಂದ ೨೯ ರ ಒಳಗಿನ ಯುವಕರು ಮಾತ್ರ ಈ ಯೋಜನೆಯಲ್ಲಿ ತೊಡಗಿಸಿಕೊಂಡಿರುವುದು ಕಂಡು ಬರುತ್ತದೆ.

**ಕೋಷ್ಟಕ ೪**

**ಕೋಷ್ಟಕ ೪** ರಲ್ಲಿ ವಿವಾಹದ ವಿಚಾರಕ್ಕೆ ಸಂಬಂಧಿಸಿದಂತೆ ತಿಳಿಸುತ್ತದೆ.

| ಫಲಾನುಭವಿಗಳು | ವಿವಾಹ | | |
|---|---|---|---|
| | ಹೌದು | ಇಲ್ಲ | ಒಟ್ಟು |
| ಪುರುಷ | ೭(೪೧.೧೭%) | ೩(೧೭.೬೫%) | ೧೦(೫೮.೮೨%) |
| ಮಹಿಳೆಯರು | ೫(೨೯.೪೧%) | ೨(೧೧.೭೬%) | ೭(೪೧.೧೮%) |
| ಒಟ್ಟು | ೧೨(೭೦.೫೯%) | ೧೭(೧೦೦%) | ೧೭(೧೦೦%) |

**ವಿಶ್ಲೇಷಣೆ:** ಈ ಮೇಲಿನ ಕೋಷ್ಟಕದ ಪ್ರಕಾರ ೪೧.೧೭% ರಷ್ಟು ಪುರುಷರು ವಿವಾಹವಾಗಿದ್ದಾರೆ. ೧೭.೬೫% ರಷ್ಟು ಪುರುಷರು ಇನ್ನೂ ವಿವಾಹ ಆಗದೇ ಇರುವವರು ಇದ್ದಾರೆ. ೨೯.೪೧% ರಷ್ಟು ಮಹಿಳೆಯರು ವಿವಾಹವಾಗಿದ್ದು, ೧೧.೭೬% ರಷ್ಟು ಮಹಿಳೆಯರು ಇನ್ನು ವಿವಾಹ ಆಗದೆ ಇರುವುದನ್ನು ನೋಡುತ್ತೇವೆ.

**ಕೋಷ್ಟಕ ೬.೫**

| ಫಲಾನುಭವಿಗಳು | ಮಕ್ಕಳು | | | | |
|---|---|---|---|---|---|
| | ೧ ಮಕ್ಕಳು | ೨ ಮಕ್ಕಳು | ೩ ಮಕ್ಕಳು | ಯಾವುದೂ ಇಲ್ಲ | ಒಟ್ಟು |
| ಪುರುಷ | ೧(೫.೮೮%) | ೪(೨೩.೫೩%) | ೨(೧೧.೭೬%) | ೩(೧೭.೬೫%) | ೧೦(೫೮.೮೩%) |
| ಮಹಿಳೆಯರು | ೧(೫.೮೮%) | – | ೪(೨೩.೫೩%) | ೨(೧೧.೭೬%) | (೪೧.೧೭%) |
| **ಒಟ್ಟು** | ೨ (೧೧.೭೬೫%) | **೪ (೨೩.೫೩%)** | **೬ (೩೫.೨೯%)** | **೫ (೨೯.೪೧%)** | **೧೭ (೧೦೦%)** |

**ವಿಶ್ಲೇಷಣೆ:** ಕೋಷ್ಠಕ ೫ ರಲ್ಲಿ ಫಲಾನುಭವಿಗಳು ಹೊಂದಿರುವಂತಹ ಮಕ್ಕಳ ಶೇಕಡಾವಾರು ಸಂಖ್ಯೆಯನ್ನು ನೋಡಬಹುದು. ೨೩.೫೩% ಇಬ್ಬರು ಗಂಡು ಮಕ್ಕಳು ಮಕ್ಕಳನ್ನು ನೋಡುತ್ತೇವೆ. ೧೭.೬೫% ರಷ್ಟು ೪ ಜನ ಗಂಡು ಮಕ್ಕಳನ್ನು ಹೊಂದಿದ್ದಾರೆ. ೧೧.೭೬% ರಷ್ಟು ೩ ಜನ ಗಂಡು ಮಕ್ಕಳನ್ನು ಹೊಂದಿದ್ದಾರೆ. ೧೧.೭೬% ರಷ್ಟು ೩ ಜನ ಗಂಡು ಮಕ್ಕಳನ್ನು ಹೊಂದಿದ್ದಾರೆ. ೫.೮೮% ರಷ್ಟು ೧ ಗಂಡು ಮಗುವನ್ನು ಹೊಂದಿದ್ದಾರೆ. ೨೩.೫೩% ರಷ್ಟು ಮೂರು ಜನ ಹೆಣ್ಣು ಮಕ್ಕಳನ್ನು ಹೊಂದಿದ್ದಾರೆ. ೧೧.೭೬% ರಷ್ಟು ನಾಲ್ಕು ಜನ ಹೆಣ್ಣು ಮಕ್ಕಳನ್ನು ಹೊಂದಿದ್ದಾರೆ. ೫.೮೮% ರಷ್ಟು ಒಂದು ಹೆಣ್ಣು ಮಗುವನ್ನು ಹೊಂದಿದ್ದಾರೆ. ಒಟ್ಟಾರೆಯಾಗಿ ಹೇಳುವುದಾದರೆ ೫೮.೮೩% ರಷ್ಟು ಗಂಡು ಮಕ್ಕಳನ್ನು ಹೊಂದಿದ್ದು ಗಂಡು ಮಕ್ಕಳಿಗೆ ಹೆಚ್ಚಿನ ಆದ್ಯತೆಯನ್ನು ನೀಡಿದ್ದು ೪೧.೧೭% ರಷ್ಟು ಮಾತ್ರ ಹೆಣ್ಣು ಮಕ್ಕಳನ್ನು ನೋಡಬಹುದು. ಇಲ್ಲಿ ಕಂಡಂತಹ ಸತ್ಯಾಂಶವೇನೆಂದರೆ ಗಂಡು ಮಕ್ಕಳಿಗೆ ಹೆಚ್ಚಿನ ಆದ್ಯತೆ ನೀಡಿರುವುದು ಕಂಡು ಬರುತ್ತದೆ.

**ಕೋಷ್ಟಕ ೬**

**ಕೋಷ್ಟಕ ೬** ರಲ್ಲಿ ಎ.ಪಿ.ಎಲ್. ಮತ್ತು ಬಿ.ಪಿ.ಎಲ್. ಪಡಿತರ ಚೀಟಿಯನ್ನು ಹೊಂದಿರುವವರನ್ನು ನೋಡಬಹುದು.

| ಫಲಾನುಭವಿಗಳು | ವರ್ಗ | | |
|---|---|---|---|
| | **ಎ.ಪಿ.ಎಲ್.** | **ಬಿ.ಪಿ.ಎಲ್.** | **ಒಟ್ಟು** |
| ಪುರುಷರು | ೧ (೫.೮೮%) | ೯ (೫೨.೯೪%) | ೧೦ (೫೮.೮೨%) |
| ಮಹಿಳೆಯರು | ೨ (೧೧.೭೬%) | ೫ (೨೯.೪೧%) | ೭ (೪೧.೧೮%) |
| ಒಟ್ಟು | ೩ (೧೭.೬೫%) | ೧೪ (೮೨.೩೫%) | ೧೭ (೧೦೦%) |

**ವಿಶ್ಲೇಷಣೆ:** ಈ ಮೇಲಿನ ಕೋಷ್ಟಕದ ಪ್ರಕಾರ ೫೨.೯೪% ಪುರುಷರು ಬಡತನ ರೇಖೆಗಿಂತ ಕೆಳಗೆಯಿದ್ದು ಬಿ.ಪಿ.ಎಲ್. ಪಡಿತರ ಚೀಟಿಯನ್ನು ಹೊಂದಿದ್ದಾರೆ. ೫.೮೮% ರಷ್ಟು ಪುರುಷರು ಮಾತ್ರ ಎ.ಪಿ.ಎಲ್. ಪಡಿತರ ಚೀಟಿಯನ್ನು ಹೊಂದಿದ್ದಾರೆ. ಮಹಿಳೆಯರಲ್ಲಿ ೨೯.೪೧%ರಷ್ಟು ಮಹಿಳೆಯರು ಬಿ.ಪಿ.ಎಲ್. ಪಡಿತರ ಚೀಟಿಯನ್ನು ಹೊಂದಿದ್ದು ೧೧.೭೬% ಮಹಿಳೆಯರು ಎ.ಪಿ.ಎಲ್. ಪಡಿತರ ಚೀಟಿಯನ್ನು ಹೊಂದಿದ್ದಾರೆ. ಒಟ್ಟಾರೆಯಾಗಿ ಹೇಳುವುದಾದರೆ ಪುರುಷ/ಸ್ತ್ರೀಯರು ಸೇರಿದಂತೆ ೮೨.೩೫% ರಷ್ಟು ಜನರು ಕಡು ಬಡವರಾಗಿದ್ದು ಬಿ.ಪಿ.ಎಲ್. ಪಡಿತರ ಚೀಟಿಯನ್ನು ಹೊಂದಿದ್ದಾರೆ. ಕೇವಲ ೧೭.೬೫% ಸ್ತ್ರೀ/ಪುರುಷರು ಮಾತ್ರ ಎ.ಪಿ.ಎಲ್. ಪಡಿತರ ಚೀಟಿಯನ್ನು ಹೊಂದಿದ್ದು ಗ್ರಾಮೀಣ ಬಡತನವನ್ನು ಎತ್ತಿ ತೋರಿಸುತ್ತದೆ.

**ಕೋಷ್ಟಕ ೭**

**ಕೋಷ್ಟಕ ೭** ರಲ್ಲಿ ಶಿಕ್ಷಣದ ಬಗ್ಗೆ **ತಿಳಿಯಬಹುದು.**

| ವಿದ್ಯಾರ್ಹತೆ | ಫಲಾನುಭವಿಗಳು | | |
|---|---|---|---|
| | ಪುರುಷರು | ಮಹಿಳೆಯರು | ಒಟ್ಟು |
| ಪ್ರಾಥಮಿಕ | ೧ (೫.೮೮%) | ೨ (೧೧.೭೬%) | ೩(೧೭.೬೫%) |
| ಪ್ರೌಢ | ೫ (೨೯.೪೧%) | ೩ (೧೭.೬೫%) | ೮ (೪೭.೦೬%) |
| ಪಿ.ಯು.ಸಿ. | ೧ (೫.೮೮%) | ೨ (೧೧.೭೬%) | ೩ (೧೭.೬೫%) |
| ಪದವಿ | ೨ (೧೧.೭೬%) | – | ೨ (೧೧.೭೬%) |
| ಉನ್ನತ ಶಿಕ್ಷಣ | ೧ (೫.೮೮%) | – | ೧ (೫.೮೮%) |
| ಒಟ್ಟು | ೧೦ (೫೮.೮೩%) | ೭ (೪೧.೧೭%) | ೧೭ (೧೦೦%) |

**ವಿಶ್ಲೇಷಣೆ:** ಈ ಮೇಲಿನ ಕೋಷ್ಟಕದಲ್ಲಿ ಪುರುಷ/ಸ್ತ್ರೀಯನ್ನು ಸೇರಿದಂತೆ ೪೭.೦೬% ಜನರು ಮಾಧ್ಯಮಿಕ ಶಿಕ್ಷಣ ಪಡೆದವರ ಸಂಖ್ಯೆಯು ಜಾಸ್ತಿಯಾದ ೧೭.೬೫% ರಷ್ಟು ಜನರು ಪ್ರಾಥಮಿಕ ಮತ್ತು ಪದವಿಪೂರ್ವ ಶಿಕ್ಷಣ ಪಡೆದವರು ಇದ್ದಾರೆ. ೧೧.೭೬% ರಷ್ಟು ಸ್ತ್ರೀ/ಪುರುಷರು ಪದವಿಯನ್ನು ಪಡೆದಿದ್ದು ೫.೮೮% ರಷ್ಟು ಸ್ತ್ರೀ/ಪುರುಷರು ಉನ್ನತ ವ್ಯಾಸಂಗವನ್ನು ಮಾಡಿದ್ದಾರೆ. ಮಾಧ್ಯಮಿಕ ಶಿಕ್ಷಣ ಪಡೆದವರ ಸಂಖ್ಯೆಯೇ ಜಾಸ್ತಿಯದೆ.

**ಕೋಷ್ಟಕ ೮**

**ಕೋಷ್ಟಕ** ೮ ರಲ್ಲಿ ಕುಟುಂಬ ಸದಸ್ಯರ ಸಂಖ್ಯೆಯನ್ನು ತಿಳಿಯಬಹುದು.

| ಫಲಾನುಭವಿಗಳು | ಕುಟುಂಬ ಸದಸ್ಯರ ಸಂಖ್ಯೆ | | | | | |
|---|---|---|---|---|---|---|
| | ೩ | ೪ | ೫ | ೬ | ೭ | ಒಟ್ಟು |
| ಪುರುಷರು | ೨ (೧೧.೭೬%) | ೩ (೧೭.೬೫%) | ೨ (೧೧.೭೬%) | ೨ (೧೧.೭೬%) | ೧ (೫.೮೮%) | ೧೦ (೫೮.೮೩%) |
| ಮಹಿಳೆಯರು | ೧ (೫.೮೮%) | ೨ (೧೧.೭೬%) | ೪ (೨೩.೫೩%) | – | – | ೭ (೪೧.೧೭%) |
| ಒಟ್ಟು | ೩ (೧೧.೭೬%) | ೫ (೨೯.೪೧%) | ೬ (೩೫.೨೯%) | ೨ (೧೧.೭೬%) | ೧ (೫.೮೮%) | ೧೭ (೧೦೦%) |

**ವಿಶ್ಲೇಷಣೆ:** ಈ ಮೇಲಿನ ಕೋಷ್ಟಕದ ಪ್ರಕಾರ ೩೫.೨೯% ರಷ್ಟು ಸ್ತ್ರೀ/ಪುರುಷರು ಕುಟುಂಬದ ಸಂಖ್ಯೆ ೫ನ್ನು ಹೊಂದಿದ್ದು ೨೯.೪೧% ರಷ್ಟು ಸ್ತ್ರೀ/ಪುರುಷರು ಕುಟುಂಬದ ಸದಸ್ಯರ ಸಂಖ್ಯೆಯನ್ನು ಹೊಂದಿದ್ದಾರೆ. ೧೧.೭೬% ರಷ್ಟು ಸ್ತ್ರೀ/ಪುರುಷರು ೩ ಮತ್ತು ೬ ಜನ ಕುಟುಂಬದ ಸದಸ್ಯರನ್ನು ಹೊಂದಿದ್ದಾರೆ. ೫.೮೮% ರಷ್ಟು ಮಾತ್ರ ೭ ಜನ ಸದಸ್ಯರನ್ನು ಹೊಂದಿರುವ ಕುಟುಂಬಗಳಾಗಿದ್ದು ೫ ಜನ ಸದಸ್ಯರನ್ನು ಹೊಂದಿರುವ ಕುಟುಂಬಗಳ ಸಂಖ್ಯೆಯು ಜಾಸ್ತಿಯಿದ್ದು ಸಣ್ಣ ಕುಟುಂಬಗಳನ್ನು ಹೆಚ್ಚಾಗಿ ನೋಡುತ್ತೇವೆ.

**ಕೋಷ್ಟಕ ೯**

**ಕೋಷ್ಟಕ ೯** ರಲ್ಲಿ ವೃತ್ತಿಯನ್ನು ಆಧರಿಸಿ **ವಿಂಗಡಿಸಲಾಗಿದೆ.**

| ವೃತ್ತಿ | ಫಲಾನುಭವಿಗಳು | | |
|---|---|---|---|
| | ಪುರುಷರು | ಮಹಿಳೆಯರು | ಒಟ್ಟು |
| ಕೃಷಿ | ೮ (೪೭.೦೬%) | (೨೩.೫೩%) | ೧೨ (೭೦.೫೯) |
| ಹೈನುಗಾರಿಕೆ | ೨ (೧೧.೭೬%) | ೪ (೨೩.೫೩%) | ೬ (೩೫.೨೯%) |
| ಕೂಲಿ | ೮ (೪೭.೦೬%) | ೫ (೨೯.೪೧) | ೧೩ (೭೬.೪೭%) |
| ಉದ್ಯೋಗ | ೧ (೫.೮೮%) | – | ೧ (೫.೮೮%) |

**ವಿಶ್ಲೇಷಣೆ:** ಈ ಮೇಲಿನ ಕೋಷ್ಟಕದ ಪ್ರಕಾರ ೭೬.೪೭% ರಷ್ಟು ಜನ ಕೂಲಿ ಕಾರ್ಮಿಕರಿದ್ದು ೭೦.೫೯%ರಷ್ಟು ಸ್ತ್ರೀ/ಪುರುಷರು ಕೃಷಿಯಲ್ಲಿ ತೊಡಗಿದ್ದಾರೆ. ೩೫.೨೯% ರಷ್ಟು ಸ್ತ್ರೀ/ಪುರುಷರು ತೊಡಗಿದ್ದಾರೆ. ೫.೮೮ರಷ್ಟು ಸ್ತ್ರೀ/ಪುರುಷರು ಸರ್ಕಾರಿ ನೌಕರರನ್ನು ನೋಡಬಹುದು. ಕೂಲಿ ಕಾರ್ಮಿಕರ ಸಂಖ್ಯೆಯೇ ಜಾಸ್ತಿಯಿದೆ ಎಂಬುದು ಈ ಅಧ್ಯಯನದಿಂದ ತಿಳಿದಂತಹ ಸತ್ಯವಾಗಿದೆ.

**ಕೋಷ್ಟಕ ೧೦**

**ಕೋಷ್ಟಕ** ೧೦ ರ[illegible] [illegible]ರ್ಷಿಕ ಆದಾಯದ **ಮಟ್ಟವನ್ನು ನೋಡಬಹುದು.**

| ಫಲಾನುಭವಿಗಳು | ಆದಾಯದ ಮಟ್ಟ | | | | |
|---|---|---|---|---|---|
| | ೧೦,[illegible] | ೧೧.೨೫ | ೨೬.೫೦ | ೫೧.೭೫ | ೭೫ ಒಟ್ಟು |
| ಪುರುಷರು | – | ೪ (೨೩.೫೩%) | ೩ (೧೭.೬೫%) | ೩ (೧೭.೬೫%) | – |
| ಮಹಿಳೆಯರು | ೨ ([illegible]) | – | ೪ (೨೩.೫೩%) | – | ೧ (೫.೮೮%) |
| ಒಟ್ಟು | ೨ (೧೧.[illegible]) | ೪ (೨೩.೫೩%) | ೭ (೪೧.೧೭%) | ೩ (೧೭.೬೫%) | ೧ (೫.೮೮%) |

**ವಿಶ್ಲೇಷಣೆ:** ಈ [illegible]ನ [illegible]ದ ಪ್ರಕಾರ ೨೩.೫೩% ರಷ್ಟು ಪುರುಷರ ಆದಾಯ ವರ್ಷಕ್ಕೆ ೧೧ ರಿಂದ ೨೫ ಸಾವಿರಗಳ[illegible]ರುತ್ತ[illegible]. ೪೧.೧೭% ರಷ್ಟು ಸ್ತ್ರೀ/ಪುರುಷರ ಆದಾಯ ೨೬ ರಿಂದ ೫೦ ಸಾವಿರ ತನಕಯಿದೆ. ೧೭.[illegible] ರ[illegible] [illegible]ರುಷರ ಅದಾಯ ೫೧ ರಿಂದ ೭೫ ಸಾವಿರಯಿದೆ. ೧೧.೭೬% ರಷ್ಟು ಮಹಿಳೆಯರ ವಾ[illegible]ಕ ಆ[illegible] ೧೦೦೦ ರಿಂದ ೧೦,೦೦೦ ಗಳಷ್ಟುಯಿದೆ. ೫.೮೮% ಮಹಿಳೆಯರ ವಾರ್ಷಿಕ ಆದಾಯ ೭೫ ಸಾ[illegible]ಕ್ಕಿಂತ [illegible]ಯಿದೆ. ೨೬ ರಿಂದ ೫೦ ಸಾವಿರ ವಾರ್ಷಿಕ ಆದಾಯ ಪಡೆಯುವುದು ಸ್ತ್ರೀ/ಪುರುಷರ ಸಂ[illegible]ಯೇ ಜಾಸ್ತಿಯಿದೆ.

**ಕೋಷ್ಟಕ ೧೧**

ಕೋಷ್ಟಕ ೧೧ ರ[illegible] ಫಲಾನುಭವಿಗಳು ಹೊಂದಿರುವ ಆಸ್ತಿಯ ವಿವರಗಳನ್ನು ನೋಡಬಹುದು.

(ಎ)

| ಆಸ್ತಿ | ಆಸ್ತಿಯ ಪ್ರಮಾಣ | | | | |
|---|---|---|---|---|---|
| | ೧ ಎಕರೆ | ೨ ಎಕರೆ | ೩ ಎಕರೆ | ಇಲ್ಲ | ಒಟ್ಟು |
| ಭೂಮಿ | ೭<br>(೪೧.೧೭%) | ೩<br>(೧೭.೬೪%) | ೨<br>(೧೧.೭೬%) | ೫<br>(೨೯.೪೧%) | ೧೭<br>(೧೦೦%) |

**ವಿಶ್ಲೇಷಣೆ:** ಈ [illegible] ಪ್ರಕಾರ ಪ್ರತಿಕ್ರಿಯದಾರರು ಹೊಂದಿರುವ ಆಸ್ತಿಯ ಪ್ರಮಾಣವನ್ನು ನೋಡಬಹುದು. ೪೧.೧೭% ರಷ್ಟು ಜನರು ಒಂದು ಎಕರೆಯನ್ನು ೨೯.೪೧ ರಷ್ಟು ಜನರು ಆಸ್ತಿಯನ್ನೇ ಹೊಂದಿಲ್ಲ. ೧೭.[illegible] ರಷ್ಟು ಜನರು ಎರಡು ಎಕರೆಯನ್ನು ೧೧.೭೬% ರಷ್ಟು ಜನರು ಮೂರು ಎಕರೆ ಜಮೀನನ್ನು ಹೊ[illegible] [illegible].೧೭ ರಷ್ಟು ಜನರು ಕೇವಲ ಒಂದು ಎಕರೆ ಜಮೀನನ್ನು ಮಾತ್ರ ಹೊಂದಿದ್ದಾರೆ. ೨[illegible]೧% ರಷ್ಟು ಜನರು ಆಸ್ತಿಯನ್ನೇ ಹೊಂದಿಲ್ಲ.

**ಕೋಷ್ಟಕ ೧೨**

ಕೋಷ್ಟ[illegible] ಫಲಾನುಭವಿಗಳು ಹೊಂದಿರುವ ಮನೆಯ ವಿವರಗಳನ್ನು ನೋಡಬಹುದು.

(ಬಿ)

| [illegible] | ಪ್ರತಿಕ್ರಿಯೆದಾರರು | | |
|---|---|---|---|
| | ಹೌದು | ಇಲ್ಲ | ಒಟ್ಟು |
| [illegible] | ೧೬<br>(೯೪.೧೨%) | ೧<br>(೫.೮೮%) | ೧೭<br>(೧೦೦%) |

**ವಿಶ್ಲೇಷಣೆ:** ಈ [illegible] ಪ್ರಕಾರ ೯೪.೧೨% ರಷ್ಟು ಜನರು ಮನೆಯನ್ನು ಹೊಂದಿರುತ್ತಾರೆ. ೫.೮೮% ಜನರು [illegible] ಮನೆ [illegible]ದದೆ ನಿಕೃಷ್ಟ ಜೀವನವನ್ನು ನಡೆಸುತ್ತಿದ್ದಾರೆ.

**ಕೋಷ್ಟಕ ೧೩**

ಕೋಷ್ಟಕ ೧೩ ರಲ್ಲಿ ಫಲಾನುಭವಿಗಳು ಹೊಂದಿರುವ ಆಸ್ತಿಯ ವಿವರಗಳನ್ನು ನೋಡಬಹುದು.

(ಸಿ)

| ಆಸ್ತಿ | ಪ್ರಮಾಣ ಗ್ರಾಂ.ಗಳಲ್ಲಿ | | | | |
|---|---|---|---|---|---|
| | [illegible] | ೨೦ ಗ್ರಾಂ | ೫೦ ಗ್ರಾಂ | ಇಲ್ಲ | ಒಟ್ಟು |
| ಚಿನ್ನ | ೪ ([illegible]) | ೪ (೨೩.೫೩%) | ೪ (೨೩.೫೩%) | ೫ (೨೯.೪೧%) | ೧೭ (೧೦೦%) |

**ವಿಶ್ಲೇಷಣೆ:** ಈ [illegible] ಪ್ರಕಾರ ೨೯.೪೧% ರಷ್ಟು ಜನರು ಚಿನ್ನವನ್ನೇ ಹೊಂದಿಲ್ಲ. ೨೩.೫೩% ರಷ್ಟು ಜನರು ೧[illegible] ೫೦ ಗ್ರಾಂ. ತನಕ ಹೊಂದಿದ್ದು ಬಡತನವನ್ನು ಎತ್ತಿ ತೋರಿಸುತ್ತದೆ.

**ಕೋಷ್ಟಕ ೧೪**

ಕೋಷ್ಟಕ ೧೪ [illegible]ಭವಿಗಳು ಪೀಠೋಪಕರಣಗಳ ವಿವರಗಳನ್ನು ನೋಡಬಹುದು.

(ಡಿ)

| ಆಸ್ತಿ | [illegible]ಮದಾರರು | | |
|---|---|---|---|
| | [illegible] | ಇಲ್ಲ | ಒಟ್ಟು |
| ಪೀಠೋ[illegible] ಕರಣಗ[illegible] | [illegible] ([illegible]%) | ೨ (೧೧.೭೬%) | ೧೭ (೧೦೦%) |

**ವಿಶ್ಲೇಷಣೆ:** ಈ [illegible] ಪ್ರಕಾರ ೮೮.೨೪% ಜನರು ಪೀಠೋಪಕರಣಗಳನ್ನು ಹೊಂದಿದ್ದಾರೆ. ೧೧.೭೬% ಜನ[illegible] ರೀತಿಯ ಪೀಠೋಪಕರಣಗಳನ್ನು ಹೊಂದದೆ ಇದ್ದು ಬಡತನವನ್ನು ವ್ಯಕ್ತಪಡಿಸುತ್ತದೆ.

**ಕೋಷ್ಟಕ ೧೫**

**ಖರ್ಚು ವೆಚ್ಚಗಳ ವಿವರ**

| | 'ಎ' ಆಹಾರ | | | |
|---|---|---|---|---|
| **ಅವಧಿ** | ೧೦೦–೫೦೦ | ೫೦೧–೭೦೦ | ೭೦೧–೧೦೦೦ | ಒಟ್ಟು |
| **ವಾರಕ್ಕೆ** | ೧೩ (೭೫.೪೭%) | ೨ (೧೧.೭೬) | ೨ (೧೧.೭೬) | ೧೭ (೧೦೦%) |
| **ತಿಂಗಳಿಗೆ** | ೧೩ (೭೬.೪೭%) | ೨ (೧೧.೭೬%) | ೨ (೧೧.೭೬%) | ೧೭ (೧೦೦%) |
| **ವರ್ಷಕ್ಕೆ** | ೧೩ (೭೬.೪೭%) | ೨ (೧೧.೭೬%) | ೨ (೧೧.೭೬) | ೧೭ (೧೦೦%) |

**ವಿಶ್ಲೇಷಣೆ:** ಈ ಮೇಲಿನ ಕೋಷ್ಟಕದ ಪ್ರಕಾರ ೧೩ ಜನ ಫಲಾನುಭವಿಗಳು ವಾರ್ಷಿಕ ೭೬.೪೭% ಆಹಾರವನ್ನು ಇಬ್ಬರು ೧೧.೭೬% ರಷ್ಟು ಆಹಾರವನ್ನು ಹಾಗೂ ಮತ್ತೆ ಇಬ್ಬರು ೧೧.೭೬% ರಷ್ಟು ಜನರು (೭೦೧–೧೦೦೦) ಅಹಾರವನ್ನು ಪಡೆಯುತ್ತಿದ್ದಾರೆ.

| | 'ಬಿ' ಆಹಾರ | | | |
|---|---|---|---|---|
| **ಅವಧಿ** | ೨೦೦ | ೨೦೧–೪೦೦ | ೪೦೧–೫೦೦ | ಒಟ್ಟು |
| **ವಾರಕ್ಕೆ** | ೧೨<br>(೭೦.೫೯%) | ೪<br>(೨೩.೫೩%) | ೧<br>(೫.೮೮%) | ೧೭<br>(೧೦೦%) |
| **ತಿಂಗಳಿಗೆ** | ೧೨<br>(೭೦.೫೯%) | ೪<br>(೨೩.೫೩%) | ೧<br>(೫.೮೮%) | ೧೭<br>(೧೦೦%) |
| **ವರ್ಷಕ್ಕೆ** | ೧೨<br>(೭೦.೫೯%) | ೪<br>(೨೩.೫೩%) | ೧<br>(೫.೮೮%) | ೧೭<br>(೧೦೦%) |

**ವಿಶ್ಲೇಷಣೆ:** ಈ ಮೇಲಿನ ಕೋಷ್ಟಕದ ಪ್ರಕಾರ ೧೨ ಜನ ಫಲಾನುಭವಿಗಳು ೭೦.೫೯%) ರಷ್ಟು ಇತರೆ ಆಹಾರವನ್ನು ೪ ಜನ ಫಲಾನುಭವಿಗಳು ೨೩.೫೩% ರಷ್ಟು ಇತರೆ ಆಹಾರವನ್ನು ಒಬ್ಬರು ೫.೮೮% ರಷ್ಟು ಆಹಾರವನ್ನು ಪಡೆಯುತ್ತಿದ್ದಾರೆ.

**ಕೋಷ್ಟಕ ೧೬**

**ನೊಂದಣಿಯಾದ ವರ್ಷ**

| ವರ್ಷ | ಫಲಾನುಭವಿಗಳು |
|---|---|
| ೨೦೦೮–೦೯ | ೧<br>(೫.೮೮%) |
| ೨೦೦೯–೧೦ | ೧೩<br>(೭೬.೪೭%) |
| ೨೦೧೦–೧೧ | ೩<br>(೧೭.೬೫%) |
| ಒಟ್ಟು | ೧೭<br>(೧೦೦%) |

**ವಿಶ್ಲೇಷಣೆ:** ಈ ಮೇಲಿನ ಕೋಷ್ಟಕದ ಪ್ರಕಾರ ೨೦೦೯–೧೦ ನೇ ಸಾಲಿನಲ್ಲಿ ೭೬.೪೭% ಜನರು ನೊಂದಣಿಯನ್ನು ೨೦೧೦–೧೧ನೇ ಸಾಲಿನಲ್ಲಿ ೧೭.೬೫% ರಷ್ಟು ಫಲಾನುಭವಿಗಳು ಹಾಗೂ ೨೦೦೮–೦೯ ನೊಂದಣಿಯನ್ನು ಮಾಡಿಸಿರುತ್ತಾರೆ. ಈ ಯೋಜನೆ ೨೦೦೫–೦೬ನೇ ಸಾಲಿನಲ್ಲಿ ಅಸ್ತಿತ್ವಕ್ಕೆ ಬಂದರು. ಹೆಬ್ರಿ ಪಂಚಾಯಿತಿಯಲ್ಲಿ ೨೦೦೯–೧೦ ನೇ ಸಾಲಿನಲ್ಲಿ ಅತಿ ಹೆಚ್ಚು ಜನರು ನೊಂದಣಿಯನ್ನು ಮಾಡಿಸಿರುತ್ತಾರೆ.

**ಕೋಷ್ಟಕ ೧೭**

**ಯೋಜನೆಯ ಬಗ್ಗೆ ಹೇಗೆ ತಿಳಿಯಿತು**

| ಸಂಖ್ಯೆ | ಫಲಾನುಭವಿಗಳು |
|---|---|
| ಅ | ಇಲ್ಲ |
| ಆ | ೧೭(೧೦೦%) |
| ಬ | ಇಲ್ಲ |
| ಕ | ಇಲ್ಲ |
| ಒಟ್ಟು | ೧೭(೧೦೦%) (೧೦೦%) |

**ವಿಶ್ಲೇಷಣೆ:** ಈ ಮೇಲಿನ ಕೋಷ್ಠಕದ ಪ್ರಕಾರ ಶೇಕಡಾ ೧೦೦% ರಷ್ಟು ಫಲಾನುಭವಿಗಳು ಪಂಚಾಯತ್‌ನಿಂದ ಈ ಯೋಜನೆಯ ಬಗ್ಗೆ ತಿಳಿದುಕೊಂಡಿರುತ್ತಾರೆ.

**ಕೋಷ್ಟಕ ೧೮**

**ಉಳಿತಾಯ ಖಾತೆ ತೆರೆದಿರುವ ಬ್ಯಾಂಕು**

| ಉಳಿತಾಯ | ಫಲಾನುಭವಿಗಳು |
|---|---|
| ಬ್ಯಾಂಕ್ | ೧೭(೧೦೦%) |
| ಅಂಚೆ ಕಛೇರಿ | ಇಲ್ಲ |
| ಒಟ್ಟು | ೧೭(೧೦೦%) |

**ವಿಶ್ಲೇಷಣೆ :** ಈ ಮೇಲಿನ ಕೋಷ್ಠಕದ ಪ್ರಕಾರ ಫಲಾನುಭವಿಗಳು ತಮ್ಮ ಉಳಿತಾಯದ ಖಾತೆಯನ್ನು ೧೦೦% ಫಲಾನುಭವಿಗಳು ಬ್ಯಾಂಕಿನಲ್ಲಿ ತೆರೆದಿರುತ್ತಾರೆ. ಈ ಯೋಜನೆಯಿಂದ ಬ್ಯಾಂಕಿನ ಬಗ್ಗೆ ಜ್ಞಾನವನ್ನು ಎಲ್ಲರೂ ಪಡೆದಂತಾಯಿತು.

**ಕೋಷ್ಟಕ ೧೯**

**ಕೂಲಿ ತೃಪ್ತಿಕರವಾಗಿದೆಯೇ**

| ಸಂಖ್ಯೆ | ಪ್ರತಿಕ್ರಿಯೆದಾರರು | | |
|---|---|---|---|
| | ಹೌದು | ಇಲ್ಲ | ಒಟ್ಟು |
| ಕೂಲಿ | 0 | ೧೭(೧೦೦%) | ೧೭(೧೦೦%) |

**ವಿಶ್ಲೇಷಣೆ:** ಕೋಷ್ಟಕ ೧೯ರಲ್ಲಿ ಈ ಯೋಜನೆಯಿಂದ ಫಲಾನುಭವಿಗಳಿಗೆ ಲಭಿಸುವ ಕೂಲಿಯ ದರವು ೧೦೦% ರಷ್ಟು ತೃಪ್ತಿಯಾಗಿಲ್ಲವೆಂದು ಫಲಾನುಭವಿಗಳು ತಮ್ಮ ಅಭಿಪ್ರಾಯವನ್ನು ತಿಳಿಸಿದ್ದಾರೆ.

**ಕೋಷ್ಟಕ ೨೦**

**ಪೂರ್ಣ ಉದ್ಯೋಗ ಸಿಗುತ್ತದೆಯೇ**

| ಸಂಖ್ಯೆ | ಪ್ರತಿಕ್ರಿಯೆದಾರರು | | |
|---|---|---|---|
| | ಹೌದು | ಇಲ್ಲ | ಒಟ್ಟು |
| ಪೂರ್ಣ ಉದ್ಯೋಗ | 0 | ೧೭(೧೦೦%) | ೧೭(೧೦೦%) |

**ವಿಶ್ಲೇಷಣೆ:** ಈ ಮೇಲಿನ ಕೋಷ್ಟಕ ೧೭ರಲ್ಲಿ ಪೂರ್ಣ ಉದ್ಯೋಗ ಸಿಗುತ್ತದೆಯೇ ಎಂಬುದನ್ನು ತಿಳಿಸುತ್ತದೆ.

**ಕೋಷ್ಟಕ ೨೧**

**ಈ ಯೋಜನೆಯ ಅಡಿಯಲ್ಲಿ ಗಳಿಸುತ್ತಿರುವ ಆದಾಯ**

| ಫಲಾನುಭವಿಗಳು | ಆದಾಯ ಪ್ರಮಾಣ | | | | | | |
|---|---|---|---|---|---|---|---|
| | ೪೦೦೦ | ೫೦೦೦ | ೬೦೦೦ | ೮೦೦೦ | ೧೦೦೦೦ | ೨೦೦೦೦ | ಒಟ್ಟು |
| ಫಲಾನುಭವಿಗಳು | ೨ (೧೧.೭೬%) | ೨ (೧೧.೭೬%) | ೧ (೫.೮೮%) | ೭ (೪೧.೧೭%) | ೪ (೨೩.೫೩%) | ೧ (೫.೮೮%) | ೧೭ (೧೦೦%) |

**ವಿಶ್ಲೇಷಣೆ:** ಈ ಮೇಲಿನ ಕೋಷ್ಟಕದ ಪ್ರಕಾರ ೭ಜನ ಫಲಾನುಭವಿಗಳು ೪೧.೧೭% ರಷ್ಟು ಆದಾಯವನ್ನು ೪ಜನ ಸದಸ್ಯರು ೨೩.೫೩% ರಷ್ಟು ಆದಾಯವನ್ನು ಇಬ್ಬರು ಸದಸ್ಯರು ೧೧.೭೬% ರಷ್ಟು ಆದಾಯವನ್ನು ಹಾಗೂ ಇಬ್ಬರು ಸದಸ್ಯರು ೧೧.೭೬% ರಷ್ಟು ಆದಾಯವನ್ನು ತಲಾ ಒಂದೊಂದು ಸದಸ್ಯರು ೫.೮೮% ರಷ್ಟು ಆದಾಯವನ್ನು ಪಡೆಯುತ್ತಾರೆ.

**೨೨. ಈ ಯೋಜನೆಯಡಿಯಲ್ಲಿ ನೊಂದಯಿಸಲು ಫಲಾನುಭವಿಗಳು ನೀಡಿರುವ ಕಾರಣಗಳು**

೧) ಉದ್ಯೋಗ ಪಡೆಯಲು

೨) ವರ್ಷದಲ್ಲಿ ಕೆಲವು ದಿನ ಕೆಲಸ ಸಿಗದೆ ಇರುವುದರಿಂದ

೩) ಉದ್ಯೋಗ ಪಡೆಯಲು

೪) ಉದ್ಯೋಗ ಪಡೆಯುವ ಮೂಲಕ ಊರಿನ ಅಭಿವೃದ್ಧಿ.

೫) ಊರಿನಲ್ಲೆ ಉದ್ಯೋಗ ಪಡೆಯಲು

೬) ಉದ್ಯೋಗ ಪಡೆಯಲು

೭) ಉದ್ಯೋಗ ಪಡೆಯಲು

೮) ಉದ್ಯೋಗ ಸಿಗುವ ಕಾರಣ ಮತ್ತು ಸ್ನೇಹಿತರ ಒತ್ತಾಯದಿಂದ

೯) ಉದ್ಯೋಗ ಪಡೆಯುವುದಕ್ಕಾಗಿ

೧೦) ನಗರ ಪ್ರದೇಶಗಳಿಗೆ ವಲಸೆ ಹೋಗಲು ಇಷ್ಟವಿಲ್ಲ. ವೃದ್ಧ ತಂದೆ ತಾಯಿಗಳಿಗೆ ಆಸರೆಯಾಗಿರುವುದು.

೧೧) ನಮಗೆ ಮತ್ತು ಊರಿನ ಆಸ್ತಿ ಸೃಷ್ಟಿಗೆ

೧೨) ಉದ್ಯೋಗದ ಅವಶ್ಯಕತೆಗಾಗಿ

೧೩) ಕೆಲಸ ಸಿಗುವ ಕಾರಣ

೧೪) ಊರಿನಲ್ಲೇ ಉದ್ಯೋಗ ಲಭ್ಯವಿರುವುದರಿಂದ

೧೫) ಉದ್ಯೋಗ ಪಡೆಯಲು

೧೬) ಸರ್ಕಾರಿ ಯೋಜನೆ ಎಂಬ ಕಾರಣಕ್ಕೆ

೧೭) ಮನೆ ಕೆಲಸದ ಜೊತೆ ಬಿಡುವು ಸಿಕ್ಕಾಗ ಉದ್ಯೋಗ ಮಾಡಲು.

ಮೇಲ್ಕಂಡ ಈ ಪ್ರಶ್ನಾವಳಿಯನ್ನು ಐವತ್ತು ಫಲಾನುಭವಿಗಳಿಗೆ ವಿತರಿಸಿದ್ದು ಅವರಲ್ಲಿ ೧೭ ಫಲಾನುಭವಿಗಳು ಪ್ರಶ್ನಾವಳಿಗೆ ಪ್ರತಿಕ್ರಿಯಿಸಿ ತಮ್ಮ ಉತ್ತರಗಳನ್ನು ನೀಡಿರುತ್ತಾರೆ.

### ೬.೨. ವಿಶ್ಲೇಷಣೆ ಮತ್ತು ಫಲಿತಗಳು

ಹೆಬ್ರಿ ಗ್ರಾಮ ಪಂಚಾಯಿತಿಯಲ್ಲಿ ಗ್ರಾಮೀಣ ಉದ್ಯೋಗ ಖಾತ್ರಿ ಯೋಜನೆಯಡಿಯಲ್ಲಿ ನೊಂದಾಯಿಸಿದ ಫಲಾನುಭವಿಗಳನ್ನು ಪರಿಣಿತರನ್ನು ಸಂಘ ಸಂಸ್ಥೆಗಳನ್ನು ಸಂದರ್ಶಿಸಿ, ಪ್ರಶ್ನಾವಳಿ ಮೂಲಕ ಈ ಕೆಳಕಂಡ ಅಭಿಪ್ರಾಯಗಳನ್ನು ಸಂಗ್ರಹಿಸಲಾಗಿದೆ.

೧) ಈ ಯೋಜನೆಯಡಿಯಲ್ಲಿ ನೊಂದಾಯಿಸಿದವರು ಶೇ. ೮೫ರಷ್ಟು ಬಿ.ಪಿ.ಎಲ್. ವ್ಯಾಪ್ತಿಗೆ ಒಳಪಟ್ಟವರು.

೨) ಮಹಿಳೆಯರೂ ಸಹ ಅತಿ ಉತ್ಸಾಹದಿಂದ (ಗೃಹಿಣಿಯರು) ಈ ಯೋಜನೆಯ ಫಲಾನುಭವಿಗಳಾಗಿದ್ದಾರೆ. ಇದರಿಂದ ಮಹಿಳಾ ಸಬಲೀಕರಣವನ್ನು ಹೆಚ್ಚಾಗಿ ಕಾಣಬಹುದು.

೩) ಈ ಯೋಜನೆಯಡಿಯಲ್ಲಿ ಪ್ರಾಥಮಿಕ ಪ್ರೌಢಶಾಲೆ, ಪದವಿಪೂರ್ವ, ಪದವಿ ಮತ್ತು ಅನಕ್ಷರಸ್ಥರೂ ಸಹ ಹೆಸರನ್ನು ನೊಂದಾಯಿಸಿಕೊಳ್ಳುವ ಮೂಲಕ ಫಲಾನುಭವಿಗಳಾಗಿದ್ದಾರೆ.

೪) ಉದ್ಯೋಗ ಖಾತ್ರಿ ಯೋಜನೆಯಡಿಯಲ್ಲಿ ಫಲಾನುಭವಿಗಳು ಕೃಷಿಕರು, ಕೂಲಿ ಕಾರ್ಮಿಕರು ಹಾಗೂ ಹೈನುಗಾರಿಕೆಯಲ್ಲಿ ತೊಡಗಿರುವವರು.

೫) ಬೇಟಿ ಮಾಡಿದ ಎಲ್ಲಾ ಫಲಾನುಭವಿಗಳ ಅಭಿಪ್ರಾಯದಂತೆ ಕೂಲಿ ತೃಪ್ತಿದಾಯಕವಾಗಿಲ್ಲ. ಹೆಚ್ಚಿನ ವೇತನ ನೀಡಿದಲ್ಲಿ ಈ ಯೋಜನೆಯು ಹೆಚ್ಚು ಆಕರ್ಷಕವಾಗಬಲ್ಲರು.

೬) ಮಧ್ಯಾಹ್ನದ ಲಘು ಉಪಹಾರದ ವ್ಯವಸ್ತೆ ಮಾಡಿದಲ್ಲಿ ಇನ್ನು ಹೆಚ್ಚು ದಕ್ಷತೆಯಿಂದ ಕೆಲಸ ನಿರ್ವಹಿಸಬಹುದು ಎಂಬ ಅಭಿಪ್ರಾಯವನ್ನು ಬಹುತೇಕ ಫಲಾನುಭವಿಗಳು ವ್ಯಕ್ತಪಡಿಸಿದ್ದಾರೆ.

೭) ವೈಯಕ್ತಿಕವಾಗಿ ಆರ್ಥಿಕ ಅಭಿವೃದ್ಧಿ ಜೊತೆ ಸಾರ್ವಜನಿಕ ಆಸ್ತಿ ಸೃಷ್ಟಿಯಾಗುವುದರಿಂದ ಸಮುದಾಯದ ಅಭಿವೃದ್ಧಿ ಸಹ ಸಾಧ್ಯ.

೮) ಹೆಬ್ರಿ ಗ್ರಾಮ ಪಂಚಾಯತ್‌ನಲ್ಲಿ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯ ಬಗ್ಗೆ ಅರಿವು ಮೂಡಿಸಲು ಪಂಚಾಯತ್ ಮತ್ತು ಸ್ವ ಸಹಾಯ ಗುಂಪುಗಳು ಹೆಚ್ಚು ಸಹಾಯಕವಾಗಿವೆ.

೯) ಫಲಾನುಭವಿಗಳು ತಮ್ಮ ಬ್ಯಾಂಕು ಖಾತೆಯನ್ನು ಸ್ಥಳೀಯ ವ್ಯವಸಾಯ ಸೇವಾ ಸಹಕಾರಿ ಬ್ಯಾಂಕ್‌ನಲ್ಲಿ ತೆರದಿರುವುದು. ಇದರಿಂದ ಸ್ಥಳೀಯ ಸಹಕಾರ ಬ್ಯಾಂಕ್ ಮೂಲಕ ಸಾಲ ಇನ್ನಿತರ ವ್ಯವಹಾರ ನಡೆಸಲು ಅವರಿಗೆ ಅನುಕೂಲವಾಗಿದೆ. ಅಲ್ಲದೆ ಬಹಳಷ್ಟು ಫಲಾನುಭವಿಗಳು ಈ ಬ್ಯಾಂಕಿನ ಷೇರುದಾರರು ಅಗಿರುವುದು ವಿಶೇಷ.

೧೦) ಬಹಳಷ್ಟು ಫಲಾನುಭವಿಗಳು ಈ ಯೋಜನೆ ನೊಂದಾವಣೆಯ ನಂತರ ಬ್ಯಾಂಕು ಖಾತೆ ತೆರದಿದ್ದಾರೆ. ಇದರಿಂದ ಆರ್ಥಿಕ ಸೇರ್ಪಡೆ ಬ್ಯಾಂಕಿಂಗ್, ಶಿಕ್ಷಣ ಬ್ಯಾಂಕು ವ್ಯವಹಾರದ ಅನುಭವ ಫಲಾನುಭವಿಗಳಿಗೆ ಸಿಗುತ್ತದೆ.

೧೧) ಕೆಲವು ಫಲಾನುಭವಿಗಳು ಈ ಯೋಜನೆಯಡಿಯಲ್ಲಿ ಬಂದ ಕೂಲಿಯಿಂದ ಸಂಘಗಳಿಂದ (ಧರ್ಮಸ್ಥಳ ಗ್ರಾಮೋದ್ಯೋಗ ಸ್ವ-ಸಹಾಯ ಸಂಘ ಇತ್ಯಾದಿ) ಪಡೆದ ಸಾಲವನ್ನು ತೀರಿಸಲು ಅನುಕೂಲವಾಗಿದೆ ಎಂದು ಅಭಿಪ್ರಾಯ ಪಟ್ಟಿದ್ದಾರೆ.

೧೨) ಈ ಯೋಜನೆಯ ಫಲಾನುಭವಿಗಳು ಪಡೆದ ಕೂಲಿಯಿಂದ ತಮ್ಮ ಮನೆ, ಶೌಚಾಲಯ ರಿಪೇರಿ ಮಾಡಿಕೊಂಡಿದ್ದಾರೆ.

೧೩) ಮಕ್ಕಳ ವಿದ್ಯಾಭ್ಯಾಸಕ್ಕೆ ತುಂಬಾ ಅನುಕೂಲವಾಗಿದೆ ಎಂದು ಕೆಲವರು ಅಭಿಪ್ರಾಯ ಪಟ್ಟಿದ್ದಾರೆ.

೧೪) "ಗ್ರಾಮೀಣ ಅಭಿವೃದ್ಧಿಯಲ್ಲಿ ಈ ಯೋಜನೆಯ ಪಾತ್ರ ಅತ್ಯುತ್ತಮವಾದುದು ಅಂದರೆ ಉಸಿರಾಟಕ್ಕೆ ಆಮ್ಲಜನಕವಿದ್ದಂತೆ" ಎಂದು ಪರಿಣಿತರು ಸಂದರ್ಶಕರು ಅಭಿಪ್ರಾಯ ಪಟ್ಟಿದ್ದಾರೆ.

೧೫) ಈ ಯೋಜನೆಯ ಸಮರ್ಪಕ ಅನುಷ್ಠಾನಕ್ಕೆ ಪಂಚಾಯತ್‌ನ ಸಿಬ್ಬಂದಿ ವರ್ಗದ ಪಾತ್ರ ಹಿರಿದಾದುದು. ಹೆಬ್ರಿ ಪಂಚಾಯತ್ ಸಿಬ್ಬಂದಿ ವರ್ಗದವರು ಈ ವಿಚಾರದಲ್ಲಿ ತುಂಬಾ ಉತ್ಸುಕರಾಗಿದ್ದಾರೆ.

೧೬) ಈ ಯೋಜನೆಯಿಂದ ಗ್ರಾಮಾಭಿವೃದ್ಧಿಗೆ ಉತ್ತಮವೆಂದು ಬಹಳಷ್ಟು ಜನ ಅಭಿಪ್ರಾಯ ಪಟ್ಟಿದ್ದಾರೆ.

# ಅಧ್ಯಾಯ – ೭

# ಸಾರ ಮತ್ತು ಕೊನೆಮಾತು

## ೭.೧. ಸಾರ

ಹಳ್ಳಿಗಳು ರಾಷ್ಟ್ರದ ಬೆನ್ನೆಲುಬು, ಯಾವುದೇ ಅಭಿವೃದ್ಧಿ ಕಾರ್ಯಕ್ರಮಗಳನ್ನು ಹಳ್ಳಿಗಳನ್ನು ಕೇಂದ್ರವಾಗಿಟ್ಟುಕೊಳ್ಳಬೇಕು. ಪ್ರಮುಖ ಕಾರಣ ರಾಷ್ಟ್ರದ ಒಟ್ಟು ಮಾನವ ಸಂಪನ್ಮೂಲದ ಶೇ. ೭೦ ರಷ್ಟು ಜನಸಂಖ್ಯೆಯು ಹಳ್ಳಿಗಳಲ್ಲೆ ವಾಸಿಸುತ್ತಿರುವುದು ಗ್ರಾಮಗಳ ಉದ್ದಾರದಿಂದ ದೇಶದ ಉದ್ದಾರ ಸಾಧ್ಯ. ಸಮಾಜದ ಅಭಿವೃದ್ಧಿಯ ಮುಖ್ಯ ಸೂಚಕ ಗ್ರಾಮೀಣ ಜನತೆಯ ಅಭಿವೃದ್ಧಿ ಮಾನವ ಸಂಪನ್ಮೂಲದ ಬಹುಭಾಗ ಪ್ರತಿನಿಧಿಸಲ್ಪಟ್ಟಿರುವ ಗ್ರಾಮೀಣ ಜನತೆಯು ಅಂಚಿಗೆ ಸೇರಿಸಲ್ಪಟ್ಟಿದ್ದಾರೆ. ಅಭಿವೃದ್ಧಿಯಲ್ಲಿ ನಗರ ಜನರಷ್ಟೇ ಗ್ರಾಮೀಣ ಜನರು ಸಹ ಪಾಲುದಾರರು ಎಂದು ಪರಿಗಣಿಸದಾಗ ಮಾತ್ರವೇ ರಾಷ್ಟ್ರದ ಸರ್ವತೋಮುಖ ಅಭಿವೃದ್ಧಿಯಾಗಲು ಸಾಧ್ಯ. ಗ್ರಾಮೀಣ ಜನರ ಕ್ರಿಯಾಶೀಲ ಭಾಗವಹಿಸುವಿಕೆ ಇಲ್ಲದೆ ಅವಿಶ್ರಾಂತ ಅಭಿವೃದ್ದಿ ಅಸಾಧ್ಯ ಇಂದು ಎಲ್ಲೆಡೆ ಕೇಳಿ ಬರುತ್ತಿರುವ ಅಭಿವೃದ್ಧಿಯ ಪರಿಕಲ್ಪನೆ ಎಂದರೆ ಒಳಗೊಳ್ಳುವ ಅಭಿವೃದ್ಧಿ. ಆದ್ದರಿಂದ ಇಂದು ತ್ವರಿತ ಆರ್ಥಿಕ ಅಭಿವೃದ್ಧಿಯನ್ನು ಸಾಧಿಸಲು ಗ್ರಾಮೀಣ ಜನರಿಗೆ ಉದ್ಯೋಗಾವಕಾಶಗಳನ್ನು ನೀಡುವುದು ಅಗತ್ಯವಾಗಿದೆ.

ಗ್ರಾಮೀಣ ಅಭಿವೃದ್ಧಿಯ ಗುರಿ ಸಾಧನೆಗೆ ಆರ್ಥಿಕ ಭದ್ರತೆಯೇ ಮೂಲ ಮಂತ್ರ. ಗ್ರಾಮೀಣ ಜನತೆಯ ಅಭಿವೃದ್ಧಿಯ ವಿಷಯದಲ್ಲಿ ಆರ್ಥಿಕ ಸ್ವಾವಲಂಬನೆಯು ಪ್ರಮುಖ ಪಾತ್ರ ವಹಿಸುತ್ತದೆ. ಆಶಕ್ತ ಗ್ರಾಮೀಣ ಜನರು ಆರ್ಥಿಕ ಸ್ವಾವಲಂಬಿಗಳಾಗಲು ಪೂರ್ಣ ಪ್ರಮಾಣದ ಉದ್ಯೋಗ ಶೀಲತೆಯನ್ನು ಬೆಳಸಬೇಕಾಗಿದೆ. ಉದ್ಯೋಗಶೀಲತೆಯು ಗ್ರಾಮೀಣ ಜನರನ್ನು ಆರ್ಥಿಕ ಸ್ವಾವಲಂಬಿಗಳಾಗಲು ಪ್ರೇರೇಪಿಸುತ್ತದೆ. ಇದಕ್ಕಾಗಿ ಕೈಗೊಂಡ ಈ ಅಧ್ಯಯನವು ಒಂದು ಪಂಚಾಯತ್ ಸಂಸ್ಥೆಯ ಪ್ರಕರಣವನ್ನು ಬಳಸಿಕೊಂಡು ಉದ್ಯೋಗ ಖಾತರಿ ಯೋಜನೆಯು ಯಾವ ರೀತಿ ಸಹಕರಿಸಿದೆ ಎಂಬುದನ್ನು ಸ್ಥಳೀಯ ಚೌಕಟ್ಟಿನಲ್ಲಿ ವಿವರಿಸಿದೆ. ವಿಶ್ಲೇಷಣೆ ಭಾಗದಲ್ಲಿ ಸಂಗ್ರಹಿಸಿದ ಮಾಹಿತಿಯಲ್ಲಿನ ಕಂಡುಕೊಂಡ ವಿಚಾರವನ್ನು ವಿವರಿಸಲಾಗಿದೆ. ಗ್ರಾಮೀಣ ಜನರ ಸಬಲೀಕರಣದಲ್ಲಿ ಉದ್ಯೋಗ ಖಾತರಿ ಯೋಜನೆಯು ವಹಿಸುವ ಪಾತ್ರ ಹಿರಿದಾದದು ಮತ್ತು ಮಹತ್ವವಾದದ್ದು.

ಮೊದಲನೆಯ ಅಧ್ಯಾಯದಲ್ಲಿ ಅಧ್ಯಯನದ ಉದ್ದೇಶ ವ್ಯಾಪ್ತಿ, ಮಹತ್ವ ಅಧ್ಯಯನ ಪ್ರದೇಶದ ಪರಿಚಯವನ್ನು ನೀಡಲಾಗಿದೆ. ಯಾವ ಉದ್ದೇಶವನ್ನಿಟ್ಟುಕೊಂಡು ಈ ಯೋಜನೆಯು ಪ್ರಾರಂಭವಾಗಿದೆ. ಅಧ್ಯಯನ ಏಕೆ ಮಹತ್ವಪೂರ್ಣವಾಗಿದೆ. ವ್ಯಾಪ್ತಿಯಲ್ಲಿ ಯಾವೆಲ್ಲಾ ಪರಿಲ್ಪನೆಗಳನ್ನು ವಿಷಯಗಳನ್ನು ಬಳಸಿಕೊಳ್ಳಲಾಗಿದೆ ಎಂದು ವಿವರಿಸಲಾಗಿದೆ.

ಎರಡನೆಯ ಅಧ್ಯಾಯದಲ್ಲಿ ಸಂಶೋಧನೆ ಎಂದರೇನು, ಅರ್ಥ, ಸಂಶೋಧನೆಯ ಹಂತಗಳು ಅಧ್ಯಯನದ ಹಾದಿ, ಸಂಶೋಧನೆಯ ಸಮಸ್ಯೆ ಸಂಶೋಧನೆಯ ಉದ್ದೇಶ, ವ್ಯಾಪ್ತಿ, ಮಿತಿಗಳು, ಸಂಶೋಧನಾ ವಿಧಾನಗಳನ್ನು ಅಧ್ಯಯನ ಮಾಡಲಾಗಿದೆ.

ಮೂರನೇ ಅಧ್ಯಾಯದಲ್ಲಿ ಅಧ್ಯಯನದ ಪ್ರಮುಖ ವಿಷಯವಾಗಿರುವ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿಯೋಜನೆ ಗ್ರಾಮೀಣ ಅಭಿವೃದ್ಧಿ ಮಹತ್ವ, ಗ್ರಾಮೀಣ ಬಡತನ, ಗ್ರಾಮೀಣ ಅಭಿವೃದ್ಧಿ ಕಾರ್ಯಕ್ರಮಗಳು, ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಆರ್ಥಿಕ ಮತ್ತು ಆರ್ಥಿಕೇತರ ಪರಿಣಾಮಗಳು ಮುಂತಾದ ವಿಷಯಗಳ ಬಗ್ಗೆ ವಿವರಿಸಲಾಗಿದೆ.

ನಾಲ್ಕನೇ ಅಧ್ಯಾಯದಲ್ಲಿ ಉಡುಪಿ ಜಿಲ್ಲೆಯ ಪರಿಚಯ, ಹೆಬ್ರಿ ಪಂಚಾಯತ್ ಪರಿಚಯ, ಪಂಚಾಯತ್ ರಾಜ್ ಮಟ್ಟದಲ್ಲಿ ಯೋಜನೆಯ ಅನುಷ್ಠಾನ ವಿವಿಧ ಜಿಲ್ಲೆಗಳ ಅಂಕಿ ಅಂಶಗಳು, ರಾಜ್ಯಗಳ್ಳಿ ಜಾರಿಯಲ್ಲಿರುವ ಕೂಲಿದರ, ಹೆಬ್ರಿ ಪಂಚಾಯತ್‌ನ ವಾರ್ಷಿಕ ವರದಿಯನ್ನು ನೋಡಬಹುದು.

ಐದನೇ ಅಧ್ಯಾಯದಲ್ಲಿ ರಾಷ್ಟ್ರೀಯ ಉದ್ಯೋಗ ಖಾತ್ರಿ ಯೋಜನೆಯ ಆರ್ಥಿಕ ಮತ್ತು ಆರ್ಥಿಕೇತರ ಪರಿಣಾಮಗಳನ್ನು ನೋಡಬಹುದು.

ಆರನೇ ಅಧ್ಯಾಯದಲ್ಲಿ ಇಡೀ ಅಧ್ಯಯನದ ಸಾರ, ಶೋಧ, ಕೊನೆಯ ಮಾತು ಮತ್ತು ಉದ್ಯೋಗ ಖಾತರಿ ಯೋಜನೆಯ ಸಮರ್ಪಕ ಅನುಷ್ಟಾನಕ್ಕೆ ಬೇಕಾದ ಸಲಹೆ ಸೂಚನೆಯನ್ನು ನೀಡಲಾಗಿದೆ.

### ೬.೨. ಅಧ್ಯಯನದ ಶೋಧ

ಅಭಿವೃದ್ಧಿಯು ದೇಶದ ಮಾನವ ಸಂಪನ್ಮೂಲದ ಪೂರ್ಣ ಪ್ರಮಾಣದ ಬಳಕೆಯನ್ನು ಬಯಸುತ್ತದೆ. ಮಾನವ ಸಂಪತ್ತಿನ ಪ್ರಮುಖ ಭಾಗವಾಗಿರುವ ಗ್ರಾಮಾಂತರ ಪ್ರದೇಶದ ಜನತೆಯನ್ನು ಸರಿಯಾದ ಮಾರ್ಗದಲ್ಲಿ ಬಳಕೆ ಮಾಡಿಕೊಳ್ಳಬೇಕು ಎಂಬುದು ಕಂಡುಕೊಂಡ ವಿಚಾರ. ಅಲ್ಲದೆ ಗ್ರಾಮೀಣ ಬಡ ಅನಕ್ಷರಸ್ಥ ಜನರನ್ನು ಆರ್ಥಿಕವಾಗಿ ಸಾಮಾಜಿಕವಾಗಿ, ಅಭಿವೃದ್ಧಿಯ ಮುಖ್ಯ ವಾಹಿನಿಗೆ ತರಬೇಕಾದ

ಅಗತ್ಯವಿದೆ. ಈ ನಿಟ್ಟಿನಲ್ಲಿ ಭಾರತೀಯ ಗ್ರಾಮೀಣ ಜನರ ಆರ್ಥಿಕ ಮತ್ತು ಆರ್ಥಿಕೇತರ ಅಭಿವೃದ್ಧಿಯನ್ನು ಸರಿಯಾಗಿ ವಿಶ್ಲೇಷಿಸಲು ಮತ್ತಷ್ಟು ಅಧ್ಯಯನದ ಅವಶ್ಯಕತೆಯಿದೆ. ಉದ್ಯೋಗ ಖಾತರಿ ಯೋಜನೆಯ ಮೂಲಕ ಅಭಿವದ್ಧಿ ಪ್ರಕ್ರಿಯೆಯಲ್ಲಿ ಗ್ರಾಮೀಣ ಜನರು ಯಾವ ರೀತಿಯಾಗಿ ಒಳಗೊಳ್ಳಲ್ಪಟ್ಟರು ಎಂಬುದು ಗಮನಿಸಬೇಕಾದ ಮತ್ತೊಂದು ಅಂಶ.

ಮಹಾತ್ಮ ಗಾಂಧಿಗೆ ಬಾಪೂಜಿ ಹಳ್ಳಿಯ ಜನರು ಆಪ್ತರಾಗಿದ್ದರು ಅವರ ಹಿತಚಿಂತನೆಯೇ ಅವರ ಸ್ವಾತಂತ್ರ್ಯ ಚಳುವಳಿಯ ಅಜೆಂಡಾದ ಪ್ರಥಮ ಆಧ್ಯತೆಯಾಗಿತ್ತು. ಹಳ್ಳಿಗಳು ಸುಧಾರಣೆಯಾಗಬೇಕು. ಸ್ವಾವಲಂಬಿ ಜೀವನ, ಗ್ರಾಮೀಣ ಜನತೆಗೆ ದೇಶಭಕ್ತಿ ಸ್ಫುರಿಸುವ ಪ್ರೇರಣೆಯಾಗಬೇಕು ಎನ್ನುವ ಗಾಂಧೀವಾದ, ಗಾಂಧಿಸಿದ್ಧಾಂತ ಮತ್ತೆ ಚಲಾವಣೆಯ ನಾಣ್ಯವಾಗಬೇಕಿದೆ.

## ೭.೩. ಕೊನೆಮಾತು

ಇಂದು ನಾವು ಸಮಾನಾಂತರಯಡೆಗೆ ಸಾಗುವ ಉದ್ದೇಶದಿಂದ ಸಬಲೀಕರಣ ಮತ್ತು ಅಭಿವೃದ್ಧಿಯಡೆಗೆ ಸಾಗುತ್ತಿದ್ದೇವೆ. ಭಾರತವು ಒಂದು ಮುಂದುವರಿಯುತ್ತಿರುವ ರಾಷ್ಟ್ರವೆಂದು ಹೇಳುವಾಗ ಆ ಮುಂದುವರಿಕೆಯಲ್ಲಿ ಗ್ರಾಮೀಣ ಸಮುದಾಯದಲ್ಲಿ ಆದಂತಹ ಪ್ರಗತಿಯನ್ನು ಒಳಗೊಂಡಿರಬೇಕು. ಗ್ರಾಮೀಣ ಜನರಿಗೆ ಎಲ್ಲಿಯವರೆಗೆ ತಮ್ಮ ಪ್ರತಿಭೆಗಳನ್ನು ತೋರ್ಪಡಿಸಲು ಸಾಧ್ಯವಿಲ್ಲವೋ ಅಲ್ಲಿಯವರೆಗೆ ದೇಶದ ಆರ್ಥಿಕ, ಸಾಮಾಜಿಕ ಅಭಿವೃದ್ಧಿ ಕಾಣಲು ಸಾಧ್ಯವಿಲ್ಲ. ದೇಶದ ಮಾನವ ಸಂಪನ್ಮೂಲದ ಬಹು ಭಾಗವಾಗಿರುವ ಅವರು ದೇಶದ ಅಭಿವೃದ್ಧಿ ಮತ್ತು ಉತ್ಪಾದನೆಯಲ್ಲಿ ಪ್ರಮುಖ ಕೊಡುಗೆ ನೀಡಿದ್ದಾರೆ. ಸಮಾಜದ ಕಲ್ಯಾಣಕ್ಕೆ ಗ್ರಾಮೀಣ ಜನರನ್ನು ಉತ್ಪಾದನೆಯ ಏಜೆಂಟ್‌ಗಳನ್ನಾಗಿ ಮಾಡಬೇಕು. ದೇಶದ ಆರ್ಥಿಕಾಭಿವೃದ್ಧಿಯ ದೃಷ್ಟಿಯಿಂದ ಗ್ರಾಮೀಣ ಜನರನ್ನು ಸಂಪೂರ್ಣ ಬಳಸಿಕೊಳ್ಳವುದು ಇಂದಿನ ಅಗತ್ಯವಾಗಿದೆ. ಉದ್ಯೋಗ ಖಾತರಿ ಯೋಜನೆಯ ಮೂಲಕ ಸಮರ್ಪಕವಾಗಿ ಸಾಧಸಿಬಹುದಾಗಿದೆ.

ದೇಶದ ಸರ್ವಾಂಗೀಣ ಪ್ರಗತಿಗಾಗಿ ಗ್ರಾಮೀಣ ಜನರು ಸಲ್ಲಿಸುತ್ತಿರುವ ಸೇವೆ ಅತೀ ದೊಡ್ಡದು ಹಾಗೂ ಅಮೋಘವಾದುದು. ಆದ್ದರಿಂದಲೇ ಅವರನ್ನು ಅವರ ಶಕ್ತಿಯನ್ನು ಗುರುತಿಸಿ ದುಡಿಯುವ ಕೈಗಳಿಗೆ ಕೆಲಸ ನೀಡಿ ಅಭಿವೃದ್ಧಿ ಪಥದಲ್ಲಿ ಮುನ್ನಡೆಯುವ ಅವಶ್ಯಕತೆ ಇದೆ. ಇದರಲ್ಲಿ ಬರಿಯ ಅವರ ಪ್ರಗತಿ ಮಾತ್ರವಲ್ಲದೆ ದೇಶದ ಪ್ರಗತಿಯೂ ಸಹ ಅಡಕವಾಗಿದೆ.

ಆರ್ಥಿಕ ಸ್ವಾವಲಂಬನೆಗೆ ಉದ್ಯೋಗ ಖಾತರಿ ಯೋಜನೆಯು ದಾರಿ ಮಾಡಿಕೊಡುತ್ತದೆ. ಸಮಗ್ರ ಅಭಿವೃದ್ಧಿ ಅಶಕ್ತರನ್ನು ಸಶಕ್ತರನ್ನಾಗಿ ಆರ್ಥಿಕ ಸ್ವಾವಲಂಬಿಗಳಾಗಳನ್ನಾಗಿ ಮಾಡುವುದು ಗ್ರಾಮೀಣ

ಬದುಕಿನ ಆಶಾಕಿರಣ ಗ್ರಾಮೀಣ ಪ್ರದೇಶಗಳಲ್ಲಿ ಜನರನ್ನು ಆರ್ಥಿಕವಾಗಿ, ಸಾಮಾಜಿಕವಾಗಿ ಮೇಲೆತ್ತುವ ಪ್ರಯತ್ನ ಮಾಡದಿದ್ದಲ್ಲಿ ಆರ್ಥಿಕ ಉನ್ನತಿ ಒಂದು ಹಗಲು ಕನಸು ಮಾತ್ರ ರಾಷ್ಟ್ರೀಯ ಉದ್ಯೋಗ ಖಾತರಿ ಯೋಜನೆಯನ್ನು ಸಮರ್ಪಕವಾಗಿ ಜಾರಿಗೆ ತಂದರೆ ಗ್ರಾಮೀಣ ಜನರು ಉತ್ತಮವಾದ ಆರ್ಥಿಕ ಆರ್ಥಿಕೇತರ ಪರಿಣಾಮಗಳನ್ನು ಕಾಣಲು ಸಾಧ್ಯ.

ಭಾರತದ ಪ್ರಧಾನ ಮಂತ್ರಿ ಮನಮೋಹನ್ ಸಿಂಗ್ ಪ್ರಕಾರ "ನಕ್ಸಲ್ ಪೀಡಿತ ಪ್ರದೇಶಗಳಲ್ಲಿ ಉದ್ಯೋಗ ಖಾತರಿ ಯೋಜನೆಯ ಅನುಷ್ಠಾನದಲ್ಲಿ ಉಂಟಾಗುತ್ತಿರುವ ಸಮಸ್ಯೆಗಳ ಬಗ್ಗೆ ಕಳವಳ ವ್ಯಕ್ತಪಡಿಸಿ ಪ್ರತಿಯೊಂದು ಗ್ರಾಮ ಪಂಚಾಯಿತಿಗಳಲ್ಲಿ ಪಂಚಾಯಿತಿ ಅಭಿವೃದ್ಧಿ ಅಧಿಕಾರಿ, ಕಿರಿಯ ಎಂಜಿನಿಯರ್ ಅವರನ್ನೊಳಗೊಂಡ ತಾಂತ್ರಿಕ ಘಟಕ ಸ್ಥಾಪಿಸಬೇಕು" ಎಂಬ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಉದ್ಯೋಗ ಖಾತರಿ ಯೋಜನೆಯ ಸಮರ್ಪಕವಾಗಿ ಅನುಷ್ಠಾನಗೊಳ್ಳದಿರುವ ಬಗ್ಗೆ ರಾಷ್ಟ್ರೀಯ ಸಲಹಾ ಮಂಡಳಿ ಅಧ್ಯಕ್ಷೆ ಸೋನಿಯಾಗಾಂಧಿ ಕಳವಳವನ್ನು ವ್ಯಕ್ತಪಡಿಸಿದ್ದಾರೆ.

## ೭.೪. ಸಲಹೆ ಸೂಚನೆಗಳು

ದೇಶದ ಅಭಿವೃದ್ಧಿಗೆ ಗ್ರಾಮೀಣ ಜನತೆಯ ಉದ್ಯೋಗಶೀಲರಾಗುವುದು ಪೂರ್ಣ ಪ್ರಮಾಣದ ಉದ್ಯೋಗ ನೀಡುವುದು ಇಂದಿನ ತುರ್ತು ಅಗತ್ಯವಾಗಿದೆ. ಈ ಮೂಲಕ ಗ್ರಾಮೀಣ ಜನತೆಯನ್ನು ಸಬಲೀಕರಣಗೊಳಿಸುವುದು ತುಂಬಾ ಅವಶ್ಯಕವಾಗಿದೆ. ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯು ಗ್ರಾಮೀಣ ಪ್ರದೇಶದ ಜನರಿಗೆ ಉಪಯುಕ್ತವಾಗಲು ಪ್ರೋತ್ಸಾಹಿಸಲು ವ್ಯವಸ್ಥಿತವಾಗಿ ಅನುಷ್ಠಾನಗೊಳ್ಳಲು ಕೆಲವು ಉಪಯುಕ್ತ ಸಲಹೆಗಳನ್ನು ನೀಡಲಾಗಿದೆ.

೧. ವೇತನವನ್ನು ಹೆಚ್ಚಿಸಬೇಕು. ಈಗಿರುವ ವೇತನಕ್ಕೆ ಗ್ರಾಮೀಣ ಜನತೆಯು ಆಕರ್ಷಿತರಾಗುವುದಿಲ್ಲ. ಇತ್ತೀಚೆಗೆ ರೂ. ೧೨೫ ಕ್ಕೆ ದಿನಗೂಲಿ ನಿಗದಿಪಡಿಸಲಾಗಿದೆ.

೨. ಈ ಯೋಜನೆಯಡಿ ಭತ್ತ, ರಾಗಿ, ಜೋಳ, ಧಾನ್ಯದ ಕೃಷಿ ಕೆಲಸಕ್ಕೂ ವೇತನ ದೊರಕಿಸಿಕೊಡಬೇಕು.

೩. ಈ ಯೋಜನೆಯಡಿ ಬರುವಂತಹ ಅನುದಾನದ ದಕ್ಷವಾಗಿ ಮತ್ತು ಸಮರ್ಪಕವಾಗಿ ಅನಷ್ಠಾನಕ್ಕೆ ಬರಬೇಕಾದರೆ ಸರ್ಕಾರೇತರ ಸಂಸ್ಥೆಗಳಿಗೆ ವಹಿಸಿಕೊಡುವುದು.

೪. ಈ ಯೋಜನೆಯ ಬಗ್ಗೆ ತರಬೇತಿಯನ್ನು ಹಮ್ಮಿಕೊಳ್ಳುವುದು.

೫. ವಾರ್ಡ್ ಸಭೆ ಮತ್ತು ಗ್ರಾಮ ಸಭೆ ಮುಖಾಂತರ ಈ ಯೋಜನೆಯ ಬಗ್ಗೆ ಜಾಗೃತಿ ಮೂಡಿಸುವುದು.

೬. ಲೆಕ್ಕ ಪರಿಶೋಧನೆಗೆ ಸಂಬಂಧಿಸಿದಂತೆ ಕಠಿಣ ನೀತಿ ನಿಯಮಗಳನ್ನು ಅನುಸರಿಸುವುದು.

೭. ಭ್ರಷ್ಟಾಚಾರ, ಸ್ವಜನ ಪಕ್ಷಪಾತ, ಕಂಡುಬಂದಲ್ಲಿ ಕಠಿಣ ಶಿಕ್ಷೆಗೆ ಗುರಿಪಡಿಸುವುದು.

೮. ಬಯೋ ಮೆಟ್ರಿಕ್ ವ್ಯವಸ್ಥೆಯನ್ನು ಜಾರಿಗೆ ತಂದು ಅರ್ಜಿ ಉದ್ಯೋಗದ ಸ್ಥಳ ಹಾಜರಾತಿ ಮತ್ತು ವೇತನವನ್ನು ನಿರ್ಧರಿಸಲು ಅನುಕೂಲವಾಗುತ್ತದೆ.

೯. ಗುಣಮಟ್ಟ ಆಸ್ತಿಗಳ ನಿರ್ಮಾಣದಲ್ಲಿ ಸರಿಯಾದ ಮೇಲ್ವಿಚಾರಣೆ ಅಗತ್ಯ ಅನವಶ್ಯಕವಾದ ವೆಚ್ಚವನ್ನು ಕಡಿಮೆ ಮಾಡಬೇಕು.

೧೦. ಈ ಯೋಜನೆಯ ಮುಖಾಂತರ ಗ್ರಾಮೀಣ ಜನತೆಯು ಎಷ್ಟರಮಟ್ಟಿಗೆ ಆರ್ಥಿಕವಾಗಿ/ ಆರ್ಥಿಕೇತರವಾಗಿ ಅಭಿವೃದ್ಧಿ ಹೊಂದಿದ್ದಾರೆ ಎಂಬುದನ್ನು ವರ್ಷಂಪ್ರತಿ ಸಮೀಕ್ಷೆ ನಡೆಸುವುದು.

೧೧. ಗ್ರಾಮೀಣ ಜನರು ನಾನಾ ರೀತಿಯ ಸಮಸ್ಯೆಗಳನ್ನು ಎದುರಿಸುತ್ತಿರುವುದರಿಂದ ಅವುಗಳ ಪರಿಹಾರಕ್ಕೆ ಸರಕಾರವು ವಿಶೇಷ ಕಾಳಜಿಯನ್ನು ವಹಿಸಬೇಕು.

೧೨. ಗ್ರಾಮೀಣ ಜನತೆಯ ಸಮಸ್ಯೆಗಳನ್ನು ಪರಿಹರಿಸಲು ಸೂಕ್ತವಾದ ಶಾಸನಗಳನ್ನು ಜಾರಿಗೆ ತರಬೇಕು.

೧೩. ಗ್ರಾಮೀಣ ಪ್ರದೇಶಗಳಲ್ಲಿ ಈಗಾಗಲೇ ಬಹಳಷ್ಟು ಕಾಮಗಾರಿಗಳು ನಡೆದಿದ್ದರೂ ಬಹುತೇಕ ಕಾಮಗಾರಿಗಳು ಗುಣಮಟ್ಟದ ಕೊರತೆಯಿಂದ ನಲುಗಿವೆ. ಆದ್ದರಿಂದ ಗುಣಮಟ್ಟವನ್ನು ಕಾಪಾಡುವುದು.

**೭.೫. ಕಾಯ್ದೆಯ ನ್ಯೂನ್ಯತೆಗಳು**

೧. ಈ ಯೋಜನೆಯ ಮಾರ್ಗಸೂಚಿ ಪ್ರಕಾರ ಒಂದು ಕುಟುಂಬಕ್ಕೆ ದೊರೆಯುವ ಒಟ್ಟು ಆದಾಯ ವಾರ್ಷಿಕ ರೂ. ೧೨೫೦೦ ಮಾತ್ರ (ರೂ. ೧೨೫ ರ ೧೦೦ ದಿನಗಳು) ಅಂದರೆ ಪ್ರತಿ ತಿಂಗಳಿಗೆ ಕೇವಲ ರೂ. ೧೦೪/(೧೦೪೧) ಆದಾಯ ಲಭ್ಯವಿದ್ದು ಇದರಿಂದ ಯಾವುದೇ ಕುಟುಂಬ ನಿರ್ವಹಣೆಗೆ ಸಾಧ್ಯವಿಲ್ಲ.

೨. ಇದು ಉದ್ಯೋಗಕ್ಕಾಗಿ ಕುಟುಂಬದ ಸದಸ್ಯರಲ್ಲಿ ಅನಗತ್ಯ ಸಂಘರ್ಷ ಪೈಪೋಟಿ ಏರ್ಪಟ್ಟು ಸಾಮಾಜಿಕ/ಗ್ರಾಮೀಣ ಅಶಾಂತಿಗೆ ಕಾರಣವಾಗಬಹುದು.

೩. ಕೆಲವು ರಾಜ್ಯ ಸರ್ಕಾರಗಳು ತಮ್ಮ ಶೇ. ೧೦ರಷ್ಟು ಪಾಲನ್ನು ಭರಿಸುವಲ್ಲಿ ಅಸಮರ್ಥವಾಗಿವೆ. ಉದಾ: ಬಿಹಾರ

೪. ಅನುಷ್ಠಾನದ ಹಂತದಲ್ಲಿ ಗ್ರಾಮ ಪಂಚಾಯತ್‌ಗೂ ಹಾಗೂ ಕಾರ್ಯಕ್ರಮ ಸಂಯೋಜಕರ ನಡುವೆ ಗೊಂದಲ ಮತ್ತು ಸಂಘರ್ಷದ ಸಾಧ್ಯತೆಗಳಿದ್ದು ಇದರಿಂದ ಸುಗಮ ಅನುಷ್ಠಾನ ಸಂದೇಹಾಸ್ಪದವಾಗಿದೆ.

೫. ಗ್ರಾಮ ಪಂಚಾಯತ್‌ಗಳು ಮತ್ತು ಅದರ ಅಧ್ಯಕ್ಷರು ಈ ಯೋಜನೆಯನ್ನು ಪ್ರಾಮಾಣಿಕವಾಗಿ ಜಾರಿಗೊಳಿಸಬೇಕು. ಆದರೆ ವಸ್ತು ಸ್ಥಿತಿ ಗಮನಿಸಿದಾಗ ಅಲ್ಲಿ ರಾಜಕೀಯ, ಜಾತಿ, ಲಿಂಗಬೇಧ, ಮುಂತಾದ ಅಂಶಗಳ ಒತ್ತಡದಿಂದಾಗಿ ನಿಜವಾದ ಫಲಾನುಭವಿಗಳಿಗೆ ಇದರ ಪ್ರಯೋಜನ ದೊರೆಯದೆ ಹೋಗಬಹುದು. (ಇದಕ್ಕೆ ಈ ಹಿಂದಿನ ಯೋಜನೆಗಳ ವೈಫಲ್ಯವೇ ಸಾಕ್ಷಿ)

೬. ಈ ಯೋಜನೆಯ ಒಟ್ಟು ಅಂದಾಜು ವೆಚ್ಚ ರೂ. ೪೦,೦೦೦ ಕೋಟಿ ಆಗಿದ್ದು ಇದು ವಿತ್ತೀಯ ಕೊರತೆಗೆ ಕಾರಣವಾಗಬಹುದು.

೭. ಇತರೆ ಯೋಜನೆಗಳಂತೆ ಇದು ಕೂಡ ಹೆಚ್ಚಿನ ಭ್ರಷ್ಟಾಚಾರಕ್ಕೆ ಹಾಗೂ ನೌಕರಶಾಹಿಯ ದುರುಪಯೋಗಕ್ಕೆ ಎಡೆಮಾಡಿ ಕೊಡುತ್ತದೆ.

**೭.೬. ಸಮಾರೋಪ**

ಒಟ್ಟಾರೆ ನೂತನವಾಗಿ ಜಾರಿಗೆ ಬಂದ ಈ ಕಾಯ್ದೆ ನಿರುದ್ಯೋಗದ ಪೆಡಂಭೂತವನ್ನು ನಿರ್ಮೂಲನೆಗೊಳಿಸುವಲ್ಲಿ ಯಶಸ್ವಿ ಆಗಬಹುದೆ? ಎಂಬುದು ಮಿತಿ ಮೀರಿದ ರಾಜಕೀಯ ಹಸ್ತಕ್ಷೇಪ ಭ್ರಷ್ಟ ಆಡಳಿತ ಯಂತ್ರ ಹಾಗೂ ಸಾಮಾಜಿಕ ಅಸಮಾನತೆಗಳ ಕಪಿಮುಷ್ಟಿಯಲ್ಲಿರುವ ನಮ್ಮ ಈ ರೋಗಗ್ರಸ್ತ ವ್ಯವಸ್ಥೆ ಎಷ್ಟರಮಟ್ಟಿಗೆ ಗ್ರಾಮೀಣ ಜನರ ಬದುಕಿಗೆ ಸಾಮಾಜಿಕ ನ್ಯಾಯ ಒದಗಿಸಬಲ್ಲದು? ಎಂಬುದನ್ನು ಕಾಲವೇ ನಿರ್ಧರಿಸಲಿದೆ. ಅಂತೂ ಅಭಿವೃದ್ಧಿ ಶೀಲ ಭಾರತ ೨೦೨೦ ರ ವೇಳೆಗೆ ನಿರುದ್ಯೋಗ ಮುಕ್ತ ರಾಷ್ಟ್ರವಾಗಲಿ ಎಂಬುದೆ ನಮ್ಮೆಲ್ಲರ ಕನಸಾಗಿದೆ.

## ಅನುಬಂಧ – ೧

# ಕರ್ನಾಟಕದಲ್ಲಿ ಉಡುಪಿ ಜಿಲ್ಲೆ



# ಅನುಬಂಧ – ೨

## ಉಡುಪಿ ಜಿಲ್ಲೆ



ಅನುಬಂಧ – ೩

# ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯ ಆರ್ಥಿಕ ಮತ್ತು ಆರ್ಥಿಕೇತರ ಪರಿಣಾಮಗಳು – ಒಂದು ಪ್ರಕರಣ ಅಧ್ಯಯನ

**ಪ್ರಶ್ನಾವಳಿ**

೧. ವೈಯಕ್ತಿಕ ಮತ್ತು ಕೌಟುಂಬಿಕ ವಿಚಾರ

೨. ಆರ್ಥಿಕ ವಿಚಾರ

೩. ಯೋಜನೆಯ ಮಾಹಿತಿ

**೧. ವೈಯಕ್ತಿಕ ಮತ್ತು ಕೌಟುಂಬಿಕ ವಿಚಾರ**

೧.೧. ಹೆಸರು :

೧.೨. ವಿಳಾಸ :

೧.೩. ಮಾತೃ ಭಾಷೆ : ಕನ್ನಡ / ತುಳು / ಕೊಂಕಣಿ

೧.೪. ಹುಟ್ಟಿದ ಸ್ಥಳ :

೧.೫. ವಯಸ್ಸು :

೧.೬. ಲಿಂಗ : ಪುರುಷ / ಸ್ತ್ರೀ

೧.೭. ವಿವಾಹಿತ/ತೆ : ಹೌದು / ಇಲ್ಲ

೧.೮. ಮಕ್ಕಳ ಸಂಖ್ಯೆ :

೧.೯. ನೀವು ಯಾವ ವರ್ಗಕ್ಕೆ ಸೇರಿದವರು : ಎ.ಪಿ.ಎಲ್./ಬಿ.ಪಿ.ಎಲ್.

೧.೧೦ ಶಿಕ್ಷಣ :

ಅ) ಪ್ರಾಥಮಿಕ

ಆ) ಪ್ರೌಢ ಶಾಲೆ

ಕ) ಪದವಿಪೂರ್ವ

ಬ) ಪದವಿ

ಡ) ಅನಕ್ಷರಸ್ಥರು

೧.೧೧. ಕುಟುಂಬದ ಒಟ್ಟು ಸದಸ್ಯರ ಸಂಖ್ಯೆ :

೧.೧೨. ಉದ್ಯೋಗ/ವೃತ್ತಿ :

ಅ) ವ್ಯವಸಾಯ

ಆ) ಹೈನುಗಾರಿಕೆ

ಕ) ಕೂಲಿ

ಬ) ಕೈಗಾರಿಕಾ ಕಾರ್ಮಿಕರು

೧.೧೩. ಕುಟುಂಬದ ವಾರ್ಷಿಕ ಆದಾಯ :

**೨. ಆರ್ಥಿಕ ವಿಚಾರ**

**ಅ.**

| ಕ್ರ.ಸಂ. | ಆಸ್ತಿ ವಿವರ | ಪ್ರಮಾಣ |
|---|---|---|
| ೧. | ಜಮೀನು | |
| ೨. | ಮನೆ | |
| ೩. | ಚಿನ್ನ, ಬೆಳ್ಳಿ | |
| ೪. | ಗೃಹ ವಸ್ತುಗಳು, ದೂರದರ್ಶನ ಶೀತಲಯಂತ್ರ ಇತ್ಯಾದಿ | |

**ಆ.**

| ಕ್ರ.ಸಂ. | ವಿವರ | ವಾರಕ್ಕೆ ರೂಪಾಯಿ | ತಿಂಗಳಿಗೆ ರೂಪಾಯಿ | ವರ್ಷಕ್ಕೆ ರೂಪಾಯಿ |
|---|---|---|---|---|
| ೧. | ಅಹಾರ / ವಸತಿ | | | |
| ೨. | ಆಹಾರೇತರ (ಶಿಕ್ಷಣ, ಆರೋಗ್ಯ, ಸಂಪ್ರದಾಯ, ಆಚರಣೆ, ಇತ್ಯಾದಿ) | | | |

## ೩. ಯೋಜನೆಯ ಮಾಹಿತಿ (ಉದ್ಯೋಗ ಖಾತರಿ ಯೋಜನೆಯ ಬಗ್ಗೆ)

೩.೧. ಯೋಜನೆಗೆ ನೊಂದಣಿಯಾದ ವರ್ಷ :

೩.೨. ಈ ಯೋಜನೆಯ ಬಗ್ಗೆ ಹೇಗೆ ತಿಳಿಯಿತು? :

ಅ) ದಿನ ಪತ್ರಕೆಗಳ ಮೂಲಕ,

ಆ) ಪಂಚಾಯತ್‌ನಿಂದ

ಬ) ಸಂಬಂಧಿಕರು ಅಥವಾ

ಕ) ಇತರೆ (ಇದ್ದರೆ ತಿಳಿಸಿ)

೩.೩. ಯೋಜನೆಯಡಿಯಲ್ಲಿ ನೊಂದಾಯಿಸಲು ಕಾರಣ.

೩.೪. ಉಳಿತಾಯ ಖಾತೆ ತೆರೆದಿರುವ ಬ್ಯಾಂಕು/ಅಂಚೆ ಕಛೇರಿ.

೩.೫. ಉಳಿತಾಯ ಖಾತೆ ತೆರೆದಿರುವ ನೋಂದಾಣಿಗಿಂತ ಮೊದಲು/ನಂತರ

೩.೬. ಕೂಲಿ ತೃಪ್ತಿಕರವಾಗಿದೆಯೇ?

೩.೭. ಪೂರ್ಣ ಉದ್ಯೋಗ ಸಿಗುತ್ತದೆಯೇ?

೩.೮. ಈ ಯೋಜನೆಯಡಿಯಲ್ಲಿ ಗಳಿಸುತ್ತಿರುವ ಆದಾಯ

೩.೯. ಈ ಯೋಜನೆಯ ಬಗ್ಗೆ ಸಂಪೂರ್ಣ ತಿಳಿವಳಿಕೆ ಇದೆಯಾ? ಹೌದು/ಇಲ್ಲ.

**ಪರಿಣಾಮಗಳು: ತೃಪ್ತಿಯ ಮಟ್ಟ**

| ಕ್ರ. ಸಂ. | ಆರ್ಥಿಕ/ಆರ್ಥಿಕೇತರ ಅಂಶಗಳು | ಉತ್ತಮ | ಅತ್ಯುತ್ತಮ | ಸಾಧಾರಣ | ಕೆಳಮಟ್ಟ | ಪರಾ |
|---|---|---|---|---|---|---|
| ೧. | ಉದ್ಯೋಗ | | | | | |
| ೨. | ಆದಾಯದ ದೃಷ್ಟಿ | | | | | |
| ೩. | ಸಾಮಾಜಿಕ | | | | | |
| ೪. | ಮಕ್ಕಳ ವಿದ್ಯಾಭ್ಯಾಸ | | | | | |
| ೫. | ಜೀವನ ಮಟ್ಟ (ಸುಧಾರಿಸಿರುವುದು) | | | | | |

೩.೧೦. ಈ ಯೋಜನೆಯದಡಿಯಲ್ಲಿ ಕೆಲಸ ನಿರ್ವಹಿಸುವಾಗ ಉಂಟಾದ ಸಮಸ್ಯೆಗಳು

೩.೧೧. ಗ್ರಾಮೀಣ ಜನರ ಅಭಿವೃದ್ಧಿಯಲ್ಲಿ ಈ ಯೋಜನೆಯ ಬಗ್ಗೆ ನಿಮ್ಮ ಅಭಿಪ್ರಾಯ.

# ಪರಾಮರ್ಶನ ಗ್ರಂಥಗಳು


೧. ಸ್ಪರ್ಧಾಸ್ಫೂರ್ತಿ : ಗ್ರಾಮ ಪಂಚಾಯಿತಿ ಕಾರ್ಯದರ್ಶಿ – ೨೦೦೯ (ನಿರ್ದಿಷ್ಠ ಪತ್ರಿಕೆ)

೨. ಡಾ. ಆರ್. ಶಂಕರಪ್ಪ : ಪಂಚಾಯಿತಿ ಅಭಿವೃದ್ಧಿ ಅಧಿಕಾರಿ ಪರೀಕ್ಷಾ ಮಾರ್ಗದರ್ಶಿ

೩. ಡಾ. ಹೆಚ್.ಆರ್. ಕೃಷ್ಣಮೂರ್ತಿ : ಭಾರತದ ಆರ್ಥಿಕ ಸಂರಚನೆ

೪. ಕರ್ನಾಟಕ ವಿಕಾಸ (ಮಾಸ ಪತ್ರಿಕೆ) ೨೦೦೬ ನವೆಂಬರ್‌ಯಿಂದ ೨೦೧೦ ಡಿಸೆಂಬರ್

೫. ಸ್ಪರ್ಧಾ ಪ್ರಪಂಚ (ಪಿ.ಡಿ.ಓ) ಪೂರ್ಣ ಪರೀಕ್ಷಾ ವಿಶೇಷಾಂಕ ಸೆಪ್ಟಂಬರ್ ೨೦೦೯.

೬. ಸ್ಪರ್ಧಾ ಚೈತ್ರ ಅಕ್ಟೋಬರ್ ೨೦೦೫ ಪ್ರಧಾನ ಸಂಪಾದಕರು ಬಿ.ಎಸ್. ವಸಂತಕುಮಾರ್

೭. ಸ್ಪರ್ಧಾ ಚೈತ್ರ ಮಾರ್ಚ್ ೨೦೧೧ ಪ್ರಧಾನ ಸಂಪಾದಕರು.

೮. ರಾಜ್ ಪ್ರವೀಣ ಸಿ.ಎಂ. ಮತ್ತು ಶಿವಣ್ಣ ಎಸ್: ಪ್ರಜಾಪ್ರಭುತ್ವ ತಳಹದಿಯ ವಿಕೇಂದ್ರೀಕರಣ ಮತ್ತು ಅಭಿವೃದ್ಧಿ ಸಮಸ್ಯೆಗಳು ಮತ್ತು ಅವಕಾಶಗಳು, ಜಯಶೀಲ, ಶೌಕತ್ ಆಲಿ ಎಂ, ಮೇಗಲಮನಿ ಸುಧಾಕರ ಎಸ್ (ಸಂ), ಕಿಸಾನ್ ಪಬ್ಲಿಕೇಷನ್ಸ್, ಮಂಗಳೂರು, ೨೦೦೭.

೯. ಶಿಶಿಲ ಪ್ರಭಾಕರ ಅಭಿವೃದ್ಧಿಯ ಅರ್ಥಶಾಸ್ತ್ರ, ಕಲಾ ಪ್ರಕಾಶನ, ಬೆಂಗಳೂರು–೨೦೦೫.

೧೦. ಮೀ ಪಿ. ಬಳಿಗಾರ ಕರ್ನಾಟಕ ವಿಕಾಸ (ಮಾಸ ಪತ್ರಿಕೆ) ಜೂನ್ ೨೦೦೬: ಭರವಸೆಯ ದಾರಿಯಲ್ಲಿ ಉದ್ಯೋಗ ಖಾತರಿ ಪುಟ ಸಂಖ್ಯೆ ೫.

೧೧. ಜೋಶಿ ಜಿ.ವಿ.: ಬಡತನ ನಿರ್ಮೂಲನೆ ಮತ್ತು ಮಹಿಳಾ ಸಬಲೀಕರಣದಲ್ಲಿ ಕಿರುಪಣಕಾಸಿನ ಪಾತ್ರ, ಜಯಶೀಲ, ಶೌಕತ್ ಆಲಿ ಎಂ. ಮೇಗಲಮನಿ, ಸುಧಾಕರ ಎಸ್. (ಸಂ) ಕಿಸಾನ್ ಪಬ್ಲಿಕೇಷನ್ಸ್, ಮಂಗಳೂರು–೨೦೦೨.

೧೨. ಪಿ.ವಿ. ಕೃಷ್ಣಪ್ಪ – ಗಾಂಧೀಜಿ ಅರ್ಥಶಾಸ್ತ್ರ, ೨೦೦೭.

೧೩. ಜೋಶಿ ಜಿ.ವಿ. ಬಡತನ ನಿರ್ಮೂಲನೆ ಮತ್ತು ಮಹಿಳಾ ಸಬಲೀಕರಣ, ಕಿಸಾನ್ ಪಬ್ಲಿಕೇಷನ್ಸ್, ಮಂಗಳೂರು_೨೦೦೭.

೧೪. ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿಯೋಜನೆ–ಕರ್ನಾಟಕ: ಮಾಹಿತಿ ಕೈಪಿಡಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಕರ್ನಾಟಕ ಸರಕಾರ.

೧೫. ಸ್ಮೃತಿ ಸಂಪದ – ೨೦೧೦, ರಜತ ಮಹೋತ್ಸವ ಸ್ಮರಣ ಸಂಚಿಕೆ ಸರ್ಕಾರಿ ಪ್ರಥಮ ದರ್ಜೆ ಕಾಲೇಜು ಬಳ್ಳಾರಿ.

# ವರದಿಗಳ ಸೂಚಿ

೧. ಯೋಜನಾ ಆಯೋಗ, ಹತ್ತನೆಯ ಪಂಚವಾರ್ಷಿಕ ಯೋಜನೆ, ನವದೆಹಲಿ

# ದಿನಪತ್ರಿಕೆಗಳ ಉಲ್ಲೇಖ

೧. ಪಿ.ಟಿ.ಐ. ಹೊಸದಿಲ್ಲಿ: ಉದ್ಯೋಗ ಖಾತರಿಗೆ ಬಯೋಮೆಟ್ರಿಕ್ ವ್ಯವಸ್ಥೆ.

೨. ವಿಜಯ ಕನಾಟಕ, ಫೆಬ್ರವರಿ ೨, ೨೦೧೧.

೩. "ಕುಬೇರ ಭಾರತದ ಒಡಲಲ್ಲಿ" ಸುಧಾಮರ ಕಥೆ. ಪಿ.ಜಿ.ವಿಜು. ವಿಜಯ ಕರ್ನಾಟಕ ೩.೧೧.೨೦೧೧.

# ಸಂದರ್ಶಿಸಿದ ವ್ಯಕ್ತಿಗಳು ಮತ್ತು ಸಂಘ ಸಂಸ್ಥೆಗಳು

೧. ಕಾರ್ಯದರ್ಶಿ, ಗ್ರಾಮ ಪಂಚಾಯತ್, ಹೆಬ್ರಿ

ಶ್ರೀ ನೀರೆ ಕೃಷ್ಣ ಶೆಟ್ಟಿ, ಮಾಜಿ ಅಧ್ಯಕ್ಷರು, ಗ್ರಾಮ ಪಂಚಾಯತ್ ಹೆಬ್ರಿ

Mob: ೯೪೪೮೨೫೨೪೧೨

೨. ಶ್ರೀ ಜಯಕರ ಶೆಟ್ಟಿ, ಮಾಜಿ ಅಧ್ಯಕ್ಷರು ಗ್ರಾಮ ಪಂಚಾಯತ್ ಹೆಬ್ರಿ

Mob: ೯೬೪೦೬೩೪೬೮೦

೩. ಶ್ರೀ ಶಿವಕುಮಾರ್, ಅಭಿವೃದ್ಧಿ ಅಧಿಕಾರಿ, ಗ್ರಾಮ ಪಂಚಾಯತ್, ಹೆಬ್ರಿ

